

2 ಏಪ್ರಿಲ್, 1995 ಭಾನುವಾರ ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರು, ತ್ರಿವಿಧ ದಾಸೋಹ ಮೂರ್ತಿಗಳಾದ **ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರಮ.ಹಾ ಸ್ವಾಮಿಗಳವರ 88ನೇ** ಜನ್ಮದಿನೋತ್ಸವ-ಗುರುವಂದನ ಮಹೋತ್ಸವವನ್ನು ಉದ್ಘಾಟನೆ ಮಾಡಿದ **ಶ್ರೀ ಹೆಚ್. ಡಿ. ದೇವೇಗೌಡರು** ಕರ್ನಾಟಕ ರಾಜ್ಯದ ಪರವಾಗಿ ಪ್ರಣಾಮಗಳನ್ನು ಸಮರ್ಪಿಸಿದರು.



ಈ ಗುರುವಂದನ ಮಹೋತ್ಸವದಲ್ಲಿ ವೇದಿಕೆಯ ಮೇಲೆ ಶ್ರೀ ಶ್ರೀಗಳಿಂದ ಎಡಕ್ಕೆ ಮುಖ್ಯ ಮಂತ್ರಿ ಹೆಚ್. ಡಿ. ದೇವೇಗೌಡರು ಮತ್ತು ಗ್ರಾಮೀಣಾಭಿವೃದ್ಧಿ ಸಚಿವರಾದ ಶ್ರೀ ಎಂ. ಪಿ. ಪ್ರಕಾಶ್, ಬಲಕ್ಕೆ ಅಧ್ಯಕ್ಷತೆ ವಹಿಸಿದ್ದ ಸುತ್ತೂರು ಮಠ ವೀರಸಿಂಹಾಸನಾಧೀಶ್ವರ **ಶ್ರೀ ಶ್ರೀ ಶಿವರಾತ್ರಿದೇಶಿಕೇಂದ್ರ ಮಹಾ ಸ್ವಾಮಿಗಳು,** ಉಪ ಮುಖ್ಯಮಂತ್ರಿ ಜೆ. ಹೆಚ್. ಪಟೇಲ್, ಲೋಕಸಭೆಯ ಉಪ ಸಭಾಪತಿ ಶ್ರೀ ಎಸ್. ಮಲ್ಲಿಕಾರ್ಜುನಯ್ಯ ಮತ್ತು ಕೇಂದ್ರಸರ್ಕಾರದ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ರಾಜ್ಯ ಸಚಿವೆ ಶ್ರೀಮತಿ ಬಸವರಾಜೇಶ್ವರಿ ಯವರು ಉಪಸ್ಥಿತರಿದ್ದಾರೆ. (ವಿ. ಸೂ:- ವರದಿ ಒಳಗೆ ನೋಡಿ)

# ಸಿದ್ಧಗಂಗಾ

ಸಂಪುಟ-31.  ಸಂಚಿಕೆ-4  ಏಪ್ರಿಲ್-1995.

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಹಗಲು ಇರುಳುಗಳೆಲ್ಲ ಸೇವಾ ಶ್ರೀಮಣಿಹಕೆ
ನಗುತುಂಬಿ ನಡೆಸಿರುವೆ ದಾಸೋಹ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

§ § §

ಬಸವ ಭಾವವ ತೆರೆದು ತೆರೆದು ತೋರಿದೆ ತಂದೆ
ಹಸಗೆಟ್ಟ ಬದುಕಿಗೆ ಬೆಳಕೆರೆದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

§ § §

ನನ್ನ ಹಾಡನ್ನೆಂತು ನಿನ್ನದೆಗೆ ಮುಟ್ಟಿಪುದು
ನಿನ್ನ ಶ್ರೀ ಪಾದವ ಮುಡಿವುದು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹೆಚ್. ವಿ. ವೀರಭದ್ರಯ್ಯ

# ಶ್ರೀವಾಣಿ



## ರತ್ನ ಬಂದಿದೆ ನೋಡಿರೋ

ಅನುಭಾವಿಗಳು ಹೇಳುವ ಮಾತೊಂದಿದೆ. ಲೋಕಜೀವನದ ಎಲ್ಲ ಭೋಗಗಳೂ ದೇವ ದೇವನ ಪ್ರಸಾದ. ಪ್ರಸಾದದ ಮಹತ್ವವನ್ನರಿತವರು ಮಾನವ ಜನ್ಮವನ್ನೇ ರತ್ನವೆಂದು ಪರಿಭಾವಿಸಿದರು. ಮನುಷ್ಯನಾಗಿ ಜನ್ಮ ತಳೆಯುವ ಮೊದಲು ಜೀವ ಅನಂತ ಜನ್ಮಗಳನ್ನು ಪಡೆದು ಬಂದಿದ್ದಾಗಿದೆ. ಕಲ್ಲು, ಮಣ್ಣು, ಗಿಡ, ಮರ, ಪಶು, ಪಕ್ಷಿ, ಕ್ರಿಮಿ, ಕೀಟ ಮುಂತಾಗಿ ಹುಟ್ಟನ್ನು ಪಡೆದ ಜೀವ ಮನುಷ್ಯನಾಗ ಬೇಕಾದರೆ ಕೋಟಿ ಜನ್ಮಗಳ ಯಾತ್ರೆಮಾಡಿ ಬಂದಿದೆ. ರತ್ನಪ್ರಾಯವಾದ ಮನುಷ್ಯ ಜನ್ಮವನ್ನು ಕುರಿತು ಅನುಭಾವಿಗಳು ಹಾಡಿದ್ದಾರೆ "ರತ್ನ ಬಂದಿದೆ ನೋಡಿರೋ ಮಾನವ ಜನ್ಮ ರತ್ನ ಬಂದಿದೆ ನೋಡಿರೋ"–ಎಂದು, ಮನುಷ್ಯ ಜನ್ಮ ರತ್ನ ಸಮಾನ. ಅಂತಹ ರತ್ನವನ್ನು ಕಾಪಾಡಿ-ಕೊಳ್ಳಬೇಕಾದ ಜವಾಬ್ದಾರಿ ನಮ್ಮದಾಗಬೇಕು. ಕಪಿಯ ಕೈಗೆ ರತ್ನ ಸಿಕ್ಕಿದರೆ ಅದರ ಬೆಲೆಯನ್ನದು ತಿಳಿಯದು. ಮೂಸಿ ನೋಡಿತು! ಕಚ್ಚಿ ನೋಡಿತು! ಕೊನೆಗೆ ತಿಪ್ಪೆಗೆ ಎಸೆದೀತು! ಅಷ್ಟೆ. ಆದರೆ ರತ್ನ ಪರೀಕ್ಷೆಯನ್ನು ಬಲ್ಲ ಜಾಣನಿಗೆ ಅದರ ಬೆಲೆತಿಳಿಯುತ್ತದೆ. ದಯಾಮಯನಾದ ಭಗವಂತನ ಪ್ರಸಾದ ಸ್ವರೂಪಿಯಾದ ಮನುಷ್ಯ ಜನ್ಮ ರತ್ನವೆಂದು ತಿಳಿದು ಬಾಳುವ ಕಲೆ ನಮ್ಮದಾಗಬೇಕು. ಅಲ್ಲಮಪ್ರಭುಗಳು ಹೇಳುವಂತೆ "ನಿನ್ನೊಡವೆಯೆಂಬುದು ಜ್ಞಾನ ರತ್ನ" ಎಂಬುದನ್ನು ತಿಳಿದು ಬಾಳಬೇಕು. ಮನುಷ್ಯನ ಆಭರಣವೆಂದ ಅವನು ಪಡೆದ ಜ್ಞಾನವೇ ಆಗಿದೆ. ಏಕೆಂದರೆ ಮನುಷ್ಯ ತರಕಾರಿಯಲ್ಲಿ, ಪ್ರಾಣಿಯಲ್ಲಿ, ಜ್ಞಾನ ಕ್ರಿಯೆಗಳ ಸಾಮರಸ್ಯವನ್ನು ಸಾಧಿಸಿದ ರತ್ನ. ಜ್ಞಾನ ಕ್ರಿಯೆಯಾಗದ ಹೊರತು ಬೆಲೆಯಿಲ್ಲ, ಕ್ರಿಯೆ ಜ್ಞಾನಸಮನ್ವಿತವಾಗದ ಹೊರತು ಪರಿಪೂರ್ಣತೆ ಕಾಣದು. ಜ್ಞಾನ–ಕ್ರಿಯೆಗಳನ್ನು ಬಸವಾದಿ ಶರಣರು ಅರಿವು–ಆಚಾರವೆಂದು ಕರೆದರು. ಅರಿವಿಂಗೆ ಅನುಭಾವವೇ ಆಶ್ರಯವೆಂದು ಹೇಳಿದರು. ಅರಿವು ಆಚಾರವುಳ್ಳವನೇ ರತ್ನ; ಪರಹಿತಾರ್ಥಕ್ಕಾಗಿ ಶ್ರಮಿಸುವವನೇ ಪರಮ ರತ್ನ. ಸತ್ಯ ಶುದ್ಧ ಕಾಯಕನಿಷ್ಠನಾದ ದಾಸೋಹಂಭಾವದ ವಿನಯ ಶೀಲನೇ ಶ್ರೇಷ್ಠ ರತ್ನ. ತನಗೆ ಒದಗಿ ಬಂದ ಮಾನವ ಜೀವಿತಾವಕಾಶವನ್ನು ರತ್ನವೆಂದು ಭಾವಿಸಿಬಾಳುವವನೇ ನಿಜರತ್ನ. ಶರಣ ಸನ್ಮಾರ್ಗ-ದಲ್ಲಿ ನಡೆವವನುರತ್ನ.

[15-4-95 ರಂದು ಚಾಮರಾಜನಗರ ತಾಲ್ಲೂಕು ಕುರುಬರ ಹುಂಡಿಯಲ್ಲಿ ಬಸವ ಜಯಂತಿ ಸಮಾರಂಭದಲ್ಲಿ ನೀಡಿದ ಆಶೀರ್ವಚನದಿಂದ ಸಂಗ್ರಹ]

## ಜಗಜ್ಯೋತಿ ಬಸವೇಶ್ವರ ನಾಟಕ : ಒಂದು ಪತ್ರ

**ಪರಮ ಪೂಜ್ಯ ಸ್ವಾಮೀಜಿಯವರಿಗೆ ಪ್ರಣಾಮಗಳು-ಸಿದ್ಧಗಂಗಾಕ್ಷೇತ್ರ**

ಪೂಜ್ಯರೇ,

ದಿನಾಂಕ 24-3-95 ರಂದು ತುಮಕೂರಿನ ಗುಬ್ಬಿ ವೀರಣ್ಣ ರಂಗಮಂದಿರದಲ್ಲಿ ತಮ್ಮ ಸಾನಿಧ್ಯದಲ್ಲಿ ಜಗಜ್ಯೋತಿ ಬಸವೇಶ್ವರ ನಾಟಕವು ಪ್ರದರ್ಶನವಾದದ್ದನ್ನು ನೋಡಿ ಅಪಾರ ಆನಂದವಾಯಿತು. ತಾವು ಸಮಾಜದ ನೈತಿಕಾಭಿವೃದ್ಧಿಗಾಗಿ ಮಾನವತ್ವಗುಣ ಶೀಲಾಭಿವೃದ್ಧಿಗಾಗಿ 300ಕ್ಕೂ ಹೆಚ್ಚು ಪ್ರದೇಶಗಳಲ್ಲಿ ತನುಮನ ನಡೆ, ನುಡಿ ಭಾವಶುಚಿಯಾಗಿ ಜನಕಲ್ಯಾಣಕ್ಕಾಗಿ ಬದುಕಿ ಬಾಳಿದ ಮಹಾಮಹಿಮರ ದಿವ್ಯ ಚರಿತ್ರೆಯನ್ನು ಕಲಾವಿದರ ಮೂಲಕ ಜನರಿಗೆ ತಿಳಿಸುತ್ತಿರುವುದಕ್ಕೆ ತಮಗೆ ಭಕ್ತಿಪೂರ್ವಕ ನಮಸ್ಕಾರಗಳನ್ನು ಅರ್ಪಿಸುತ್ತೇನೆ. ಕಥೆ, ಸಾಹಿತ್ಯ, ಸಂಭಾಷಣೆ, ಅಭಿನಯ ವೇಷಭೂಷಣ ಎಲ್ಲವೂ ಚೆನ್ನ. ಸ್ತ್ರೀ ಪಾತ್ರಧಾರಿಗಳ ವಚನಗಳಿಗೆ ಮಾತ್ರ ಹಿನ್ನೆಲೆಯ ಗಾಯನ ದೊರೆತರೆ ಅಭಿನಯಕ್ಕೆ ಸಹಜತೆ ಸಿಕ್ಕರೆ, ಹರಳಯ್ಯನ ಪಾದರಕ್ಷೆ ಪವಾಡಕ್ಕೆ ವೈಚಾರಿಕತೆ ಲಭ್ಯವಾದರೆ ಉತ್ತಮವೆಂದು ಹಾಗೂ ಮಾರಿದೇವಿ ಪೂಜೆಯ ಹಿನ್ನೆಲೆಯಲ್ಲಿ ಮೂಢತ್ವವನ್ನು ಅಲ್ಲಗಳೆಯುವ ಭಾಗ ಹೆಚ್ಚಾಗಿದ್ದರೆ ತುಂಬಾ ಚೆನ್ನಾಗಿರುತ್ತದೆ. ವಚನಗಳ ಹಾಡುಗಾರಿಕೆಯಲ್ಲಿ ಮಾಧುರ್ಯವಿದೆ. ಅದು ಇನ್ನಿಷ್ಟು ಹದಗೊಂಡರೆ ಪರಮಾನಂದವಾಗುತ್ತದೆ. ಹರಳಯ್ಯ, ಬಸವಣ್ಣ, ಕಲಾವತಿ, ಕೊಂಡಿ ಮಂಚಣ್ಣ, ಬಿಜ್ಜಳ, ಅಕ್ಕಮಹಾದೇವಿ ಅಲ್ಲಮಪ್ರಭುಗಳ ಪಾತ್ರಧಾರಿಗಳು ಸಹಜವಾಗಿ ಅಭಿನಯಿಸಿದ್ದಾರೆ.

ಒಟ್ಟಾರೆ ಜೀವನದಲ್ಲಿ ನೊಂದು ಬೆಂದ ಮನಸ್ಸಿಗೆ ನಾಟಕ ಸಾಂತ್ವನ ನೀಡುತ್ತದೆ. ಮೂಢರ ಕಣ್ಣು ತೆರೆಸುತ್ತದೆ. ಅಜ್ಞಾನ ಕಳೆದು ಸುಜ್ಞಾನ ಬೆಳೆಯುತ್ತದೆ. ಇನ್ನೊಮ್ಮೆ ಹೆಚ್ಚಿನ ಪ್ರಚಾರದೊಂದಿಗೆ ನಾಟಕ ನಗರದಲ್ಲಿ ಪ್ರದರ್ಶನಗೊಳ್ಳಲು ತಾವು ಅವಕಾಶ ಮಾಡಿಕೊಡಬೇಕೆಂದು ಪ್ರಾರ್ಥಿಸುತ್ತೇನೆ

ಭಕ್ತಿ ನಮನಗಳೊಂದಿಗೆ,

ತಮ್ಮ ವಿಧೇಯ ಭಕ್ತ

**ಹ.ಬ. ಮಹದೇವಪ್ಪ,**

ಅಧ್ಯಕ್ಷರು ಕನ್ನಡ ಸಾಹಿತ್ಯ ಪರಿಷತ್,

ತುಮಕೂರು ಜಿಲ್ಲೆ-ತುಮಕೂರು.

ದಿನಾಂಕ : 28-3-1995

# ಶ್ರೀ ಸಿದ್ಧಲಿಂಗೇಶ್ವರ ವಚನ



ಮಣ್ಣನಚ್ಚಿ ಮನೆಯ ಮಚ್ಚಿದವಂಗೆ
ಗುರುವಿನ ಮಚ್ಚೆಲ್ಲಿಯದೋ ?
ಹೆಣ್ಣನಚ್ಚಿ ಹೊನ್ನನಚ್ಚಿದವಂಗೆ
ಲಿಂಗದ ಮಚ್ಚೆಲ್ಲಿಯದೋ ?
ಹೆಂಡತಿ ಮಕ್ಕಳು ಬಂಧುಗಳು ಹಿತರೆಂದು ಮಚ್ಚಿದವರಿಗೆ
ಜಂಗಮದ ಮಚ್ಚೆಲ್ಲಿಯದೋ ?
ಗುರುಲಿಂಗ ಜಂಗಮವ ನಂಬದವರಿಗೆ
ಮುಕ್ತಿಯೆಂಬುದು ಕನಸಿನಲ್ಲಿಯೂ ಇಲ್ಲವಯ್ಯ
ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೆ
ನಿಮ್ಮ ನಂಬದ ಪಾಪಿಗಳಿಗೆ !

ಮಣ್ಣು ಹೆಣ್ಣು ಹೊನ್ನುಗಳನ್ನು ನಚ್ಚಿಕೊಂಡ ವ್ಯಕ್ತಿಗಳಲ್ಲಿ ಗುರುಲಿಂಗ ಜಂಗಮ ಭಕ್ತಿಯು ಇರಲಾರದು. ಯಾರು ಗುರು ಲಿಂಗ ಜಂಗಮರನ್ನು ಭಕ್ತಿಯಿಂದ ನಂಬದಿರುವರೊ ಅವರಿಗೆ ಮುಕ್ತಿಯೆಂಬುದು ಕನಸಿನಲ್ಲಿಯೂ ಕೂಡ ಸಾಧ್ಯನಾಗದು. ಯಾಕೆಂದರೆ ಅಂಥವರು ನಿಜವಾಗಿಯೂ ಪಾಪಿಗಳೇ ಆಗಿರುವರು. ಪಾಪಾತ್ಮರಿಗೆ ಮುಕ್ತಿಯೆಂಬುದೆಲ್ಲಿ ಬರಬೇಕು ! ಅವರಿಗೆ ಬಂಧನವೇ ಗತಿ

(ಕೃಪೆ : ಷಟ್‌ಸ್ಥಲ ಜ್ಞಾನಸಾರಾಮೃತ– ಶ್ರೀ ತೋಂ. ಸಿ. ಕೈಂ. ಸೇವಾ ಸಂಘ, ಎಡೆಯೂರು ಗದಗ)

### ಲೇಖಕರಲ್ಲಿ ಮನವಿ

"ಸಿದ್ಧಗಂಗಾ" ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ, ಮೇಲಾಗಿ ಶ್ರೀ ಮಠದ ಮುಖವಾಣಿ. ಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ 31ನೇ ವರ್ಷಕ್ಕೆ ಪಾದಾರ್ಪಣೆ ಮಾಡಿದೆ. ತ್ರಿವಿಧ ದಾಸೋಹ ತತ್ಪರತೆಯಿಂದ ಮುನ್ನಡೆಯುತ್ತಿರುವ ಪತ್ರಿಕೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ, ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

"ಸಂಪಾದಕರು"
**'ಸಿದ್ಧಗಂಗಾ' ಮಾಸ ಪತ್ರಿಕೆ**
ಶ್ರೀ ಸಿದ್ಧಗಂಗಾಮಠ
ತುಮಕೂರು ಜಿಲ್ಲೆ–572104.

**1–1–95 ರಿಂದ ಚಂದಾ ದರ**
ವಾರ್ಷಿಕ ಚಂದಾ 35-00 ರೂ
ಆಜೀವ ಸದಸ್ಯತ್ವ 500-00

# ಸಂಪಾದಕೀಯ

ಏಪ್ರಿಲ್ ಎರಡರಂದು ಶ್ರೀ ಮಠದಲ್ಲಿ 'ಗುರುವಂದನ' ಸಮಾರಂಭ ನಡೆಯಿತು. ರಮ ಪೂಜ್ಯ **ಡಾ. ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ** 88ನೆಯ ಜನ್ಮ ನಾಚರಣೆಯ ಪುಣ್ಯ ಸಂದರ್ಭದಲ್ಲಿ 'ಗುರುವಂದನ' ಭಕ್ತಾದಿಗಳು, ಅಭಿಮಾನಿಗಳು, ಳೆಯ ವಿದ್ಯಾರ್ಥಿಗಳು, ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ವಿವಿಧ ಶಿಕ್ಷಣ ಸಂಸ್ಥೆ ಳಲ್ಲಿ ಸೇವೆಸಲ್ಲಿಸುತ್ತಿರುವ ಶಿಕ್ಷಕ ಶಿಕ್ಷಕೇತರ ಸಿಬ್ಬಂದಿ ಬಂಧುಗಳು ಸಾರ್ವಜನಿಕವಾಗಿ ಚರಿಸಿದ ಸಮಾರಂಭ ಅವಿಸ್ಮರಣೀಯ ವೆನಿಸಿತು. ಒಂದುನೂರಕ್ಕೂ ಹೆಚ್ಚು ವಿವಿಧ ಠಗಳಿಂದ ಹರಗುರು ಚರಮೂರ್ತಿಗಳು ದಯಮಾಡಿಸಿ ಗುರುವಂದನದಲ್ಲಿ ಾಲ್ಗೊಂಡರು. ನಾಡಿನ ಮೂಲೆ ಮೂಲೆಯಿಂದ ಭಕ್ತಾದಿಗಳು ಆಗಮಿಸಿದ್ದರು.

ಸಮಾರಂಭದ ದಿವ್ಯ ಅಧ್ಯಕ್ಷತೆಯನ್ನು ಸುತ್ತೂರು ವೀರಸಿಂಹಾಸನಾಧೀಶ್ವರ ಗದ್ದುಗೆ **ಶ್ರೀ ಶಿವರಾತ್ರಿದೇಶಿಕೇಂದ್ರಮಹಾಸ್ವಾಮಿಗಳು** ವಹಿಸಿ ಕಾರ್ಯ ಮವನ್ನು ಯಶಸ್ವಿಯಾಗಿ ನಡೆಸಿಕೊಟ್ಟು ಆಶೀರ್ವದಿಸಿದರು.

ಸಮಾರಂಭವನ್ನು ರಾಜ್ಯದ ಜನತೆಯ ಪರವಾಗಿ ಉದ್ಘಾಟಿಸಿದ ಮುಖ್ಯ ಂತ್ರಿಗಳಾದ **ಮಾನ್ಯ ಶ್ರೀ ಹೆಚ್. ಡಿ ದೇವೇಗೌಡರು** ಶ್ರೀ ಮಠದ ಸೇವೆಯನ್ನು ಶಂಶಿಸುತ್ತ ಪೂಜ್ಯ ಶ್ರೀ ಶ್ರೀಗಳವರ ಅನುಪಮ ವ್ಯಕ್ತಿತ್ವವನ್ನು ಕುರಿತು ಗುಣಗಾನ ಾಡಿದರು ಭಕ್ತಿ ಪುಷ್ಪಮಾಲೆಯನ್ನರ್ಪಿಸಿ ಪೂಜ್ಯ ಶ್ರೀಗಳು ನೂರುಕಾಲ ಬಾಳಲಿ ಂದು ಪ್ರಾರ್ಥಿಸಿದರು.

ಪರಮಪೂಜ್ಯ ಶ್ರೀ ಶ್ರೀಗಳ ಭಾವಚಿತ್ರವನ್ನು ಅನಾವರಣ ಮಾಡಿದ ರಾಜ್ಯದ ಪಮುಖ್ಯಮಂತ್ರಿಗಳಾದ **ಮಾನ್ಯ ಶ್ರೀ ಜೆ.ಹೆಚ್. ಪಟೇಲ್** ಅವರು ಶ್ರೀ ಮಠದ ಷ್ಕಾಮ ಸೇವೆಯನ್ನು ಶ್ಲಾಘಿಸಿದರು.

ಸಚಿವರಾದ **ಮಾನ್ಯ ಶ್ರೀ ಎಂ.ಪಿ. ಪ್ರಕಾಶ್** ಅವರು ಅಭಿನಂದನಾ ಭಾಷಣ ಾಡುತ್ತ ಬಸವಾದಿ ಶರಣರ ತತ್ವಗಳನ್ನು ಸಂದೇಶವನ್ನು ಕೃತಿರೂಪದಲ್ಲಿ ಉಳಿಸಿ ೊಂಡು ಬಂದಿರುವ ಪೂಜ್ಯ ಶ್ರೀಗಳವರ ಮಾರ್ಗವನ್ನು ಯುವ ಜನಾಂಗ ಅರಿತು ಡೆಯಬೇಕು ಎಂದರು.

ಸಮಾರಂಭದಲ್ಲಿ ಲೋಕಸಭೆಯ ಉಪಸಭಾಪತಿಗಳಾದ **ಮಾನ್ಯ ಶ್ರೀ ಎಸ್. ಲ್ಲಿಕಾರ್ಜುನಯ್ಯನವರು** ಮಾತನಾಡುತ್ತ ಶ್ರೀ ಸಿದ್ಧಗಂಗಾ ಮಠದಲ್ಲಿ ಓದಿದ ದ್ಯಾರ್ಥಿಯೆಂದರೆ ಅವನಿಗೊಂದು ವೈಶಿಷ್ಟ್ಯವಿರುತ್ತದೆ. ಶ್ರೀ ಸಿದ್ಧಗಂಗಾ ವಿದ್ಯಾ ಂಸ್ಥೆಯಲ್ಲಿ ಕೆಲಸ ಮಾಡುವ ಬಂಧುವೆಂದರೆ ಅವನಿಗೊಂದು ವಿಶೇಷತೆಯಿರುತ್ತದೆ ಂದು ನುಡಿದರು.

ವಿಧಾನ ಪರಿಷತ್ತಿನ ಉಪಾಧ್ಯಕ್ಷಿಣಿಯಾದ **ಶ್ರೀಮತಿ ರಾಣಿಸತೀಶ್** ಅವರು ಶಾಸಕರಾದ **ಮಾನ್ಯ ಶ್ರೀ ಎಸ್. ಶಿವಣ್ಣ**ನವರು ಮಾತನಾಡಿದರು.

ಸಮಾರಂಭದಲ್ಲಿ ಸಮಾಜ ಸೇವೆಸಲ್ಲಿಸಿದ ನ್ಯಾಯನಿಷ್ಠುರಿ ನಿಜಶರಣ **ಡಾ|| ಪಾಟೀಲ ಪುಟ್ಟಪ್ಪ,** ಪ್ರಾಧ್ಯಾಪಕ ಪ್ರಶಾಂತ **ಡಾ|| ಹಾ. ಮಾ. ನಾಯಕ**, ರಾಜಕೀಯ ಮುತ್ಸದ್ದಿ **ಮಾನ್ಯ ಶ್ರೀ ಕೆ. ಹೆಚ್. ರಂಗನಾಥ್,** ಮತ್ತು ವಣಿಕ ಮಾಣಿಕ್ಯ **ಮಾನ್ಯ ಶ್ರೀ ಟಿ. ಅನಂತರಾಮ ಶ್ರೇಷ್ಠಿ**ಯವರನ್ನು ನೆನಪಿನಕೊಡುಗೆಗಳನ್ನಿತ್ತು ಸನ್ಮಾನಿಸಲಾಯಿತು.

ಪರಮ ಪೂಜ್ಯ **ಶ್ರೀ ಶ್ರೀಗಳವರು** ಆಶೀರ್ವಚನ ಮಾಡುತ್ತ ನೈತಿಕ ದಿವಾಳಿಯಿಂದ ಸಮಾಜ ಮುಕ್ತವಾಗಬೇಕಾದರೆ ಭಗವಾನ್ ಬಸವಣ್ಣನವರ ಧ್ಯೇಯಾದರ್ಶಗಳನ್ನು ನಾವಿಂದು ಪಾಲಿಸಬೇಕಾಗಿದೆ ಎಂದು ನುಡಿದರು.

ಶಿವಾನುಭವ ಗೋಷ್ಠಿಯಲ್ಲಿ **ಡಾ|| ಪಿ ವಿ. ನಾರಾಯಣ** ಅವರು ಕಾಯಕ ಮತ್ತು ದಾಸೋಹವನ್ನು ಕುರಿತು ವಿಚಾರ ಪೂರ್ಣವಾದ ಉಪನ್ಯಾಸ ನೀಡಿದರು. **ಮಾನ್ಯ ಶ್ರೀ ಷಣ್ಮುಖಯ್ಯ ಅಕ್ಕೂರು ಮಠ** ಅವರು ಗುರು-ಲಿಂಗ-ಜಂಗಮದ ಮಹತ್ವವನ್ನು ಕುರಿತು ಉತ್ತಮ ವಿಚಾರಗಳನ್ನು ಸಭೆಯ ಗಮನಕ್ಕೆ ತಂದರು.

ಬೆಳಗಿನ ಅಧಿವೇಶನವನ್ನು ಬೆಂಗಳೂರು ಜಿಲ್ಲೆಯ ವಿಶೇಷ ಜಿಲ್ಲಾಧಿಕಾರಿಗಳಾದ **ಮಾನ್ಯ ಶ್ರೀ ಸಿ. ಸೋಮಶೇಖರ್** ಅವರು ಕಾರ್ಯಕ್ರಮ ನಿರೂಪಿಸಿದರು.

ಎರಡನೆಯ ಅಧಿವೇಶನವಾದ ಶಿವಾನುಭವಗೋಷ್ಠಿಯಲ್ಲಿ ಪರಮ ಪೂಜ್ಯ ಶ್ರೀ ಶ್ರೀಗಳವರ ವಜ್ರಮಹೋತ್ಸವ ಯೋಜನೆಗೆ ಉದಾರವಾಗಿ ದಾನ ಮಾಡಿದ ಅಭಿಮಾನಿ ಬಂಧುಗಳನ್ನು ನೆನಪಿನ ಕೊಡುಗೆಯಾಗಿ ಕೈಗಡಿಯಾರವನ್ನು ನೀಡಿ ಸನ್ಮಾನಿಸಲಾಯಿತು. ಈ ಕಾರ್ಯಕ್ರಮವನ್ನು ವಜ್ರಮಹೋತ್ಸವದ ಕಾರ್ಯಾಧ್ಯಕ್ಷರಾದ **ಮಾನ್ಯ ಶ್ರೀ ಬಿ. ಎಸ್. ಮುದ್ದಪ್ಪ**ನವರು ನಡೆಸಿಕೊಟ್ಟರು.

'ಗುರುವಂದನ' ಸಮಾರಂಭ ಅರ್ಥಪೂರ್ಣವಾಗುವಂತೆ ಮುಂಬರುವ ವರ್ಷಗಳಲ್ಲಿ ವಿಚಾರವಂತರು ಸಲಹೆ ಸೂಚನೆಗಳನ್ನು ನೀಡಬೇಕೆಂದು 'ಸಿದ್ಧಗಂಗಾ' ನಮ್ರವಾಗಿ ವಿನಂತಿಸುತ್ತದೆ.

ಸಮಾರಂಭದ ಯಶಸ್ವಿಗೆ ಸಹಕರಿಸಿದ ಸಮಸ್ತ ಬಂಧುಗಳಿಗೂ 'ಸಿದ್ಧಗಂಗಾ' ವಂದಿಸುತ್ತದೆ.

ಇತಿಹಾಸಕಾರರು ಇತಿಹಾಸವನ್ನು ಬರೆಯುತ್ತಾರೆ. ಕೆಲವರು ಇತಿಹಾಸವನ್ನು ನಿರ್ಮಿಸುತ್ತಾರೆ. ಕೆಲವರು ತಾವೇ ಇತಿಹಾಸವಾಗುತ್ತಾರೆ. ವೀರಾಪುರದ ಹೊನ್ನೇಗೌಡ ಹಾಗೂ ಗಂಗಮ್ಮನವರ ಹದಿಮೂರನೆಯ ಮಗುವಾಗಿ 1-4-1908 ರಲ್ಲಿ ಹುಟ್ಟಿದ ಶಿವಣ್ಣನೆಂಬ ಹುಡುಗ ಅಂಥ ಇತಿಹಾಸವಾಗುತ್ತಾನೆಂದು ಕಂಡವರು ಯಾರು? ಶ್ರೀ ಉದ್ದಾನ ಶಿವಯೋಗಿಗಳ ಉತ್ತರಾಧಿಯಾರೆಂದು ತೀರ್ಮಾನವಾಗಿದ್ದ ಮರುಳಾರಾಧ್ಯರ ಅಕಾಲ ವಿಯೋಗದಿಂದ ಶಿವಣ್ಣ ಸಿದ್ಧಗಂಗೆಯ ಮಠಾಧೀಶರಾದರು. ಶಿವಕುಮಾರಸ್ವಾಮಿಗಳೆಂದು ಪುನರ್ನಾಮಕರಣ ಪಡೆದರು.

ಶ್ರೀ ಶಿವಕುಮಾರ ಸ್ವಾಮಿಗಳು ಮಠಾಧೀಶರಾದಾಗ ಸು. 40 ಬಡ ವಿದ್ಯಾರ್ಥಿಗಳಿಗೆ ಆಶ್ರಯ ನೀಡಿದ್ದ ಶ್ರೀ ಮಠದ ಆರ್ಥಿಕ ಸ್ಥಿತಿ ಅಷ್ಟೇನೂ ಉತ್ತಮವಾಗಿರಲ್ಲಿಲ್ಲ. ಒಂದು ರೀತಿಯಲ್ಲಿ, ಉದ್ದಾನ ಶಿವಯೋಗಿಗಳಿಂದ ಶಿವಕುಮಾರಸ್ವಾಮಿಗಳಿಗೆ ನೀಡಿದ್ದು ದಾಸೋಹದ ಪುಣ್ಯ ಹಾಗೂ ಹೃದಯತುಂಬಿದ ಕೃಪಾಶೀರ್ವಾದಗಳು. ಅದರ ನಿರ್ವಹಣೆಗಿದ್ದದ್ದು ಎರಡೇ ಒಂದು ದೊಡ್ಡ ಜೋಳಿಗೆ; ಮತ್ತೊಂದು ರುದ್ರಾಕ್ಷಿಯ ಮಾಲೆ.

ರುದ್ರಾಕ್ಷಿ ಮಾಲೆ ತಪಸ್ಸಿನ ಹಾಗೂ ವೈರಾಗ್ಯದ ಸಂಕೇತವಾದಂತೆ ಜೋಳಿಗೆಯೂ ಒಂದು ಸಂಕೇತವೇ. ಅದು ಭಿಕ್ಷೆಯ ಪಾತ್ರವಾಗಿರಲಿಲ್ಲ; ಸುತ್ತಣ ಸಮಾಜದ ಎಲ್ಲ ಜನಾಂಗಗಳ ಪ್ರೀತ್ಯಭಿಮಾನ ಭಕ್ತಿಗಳನ್ನು ತುಂಬಿಕೊಂಡ ಅಕ್ಷಯ ಪಾತ್ರೆಯಾಗಿತ್ತು. ಇಲ್ಲದಿದ್ದರೆ ಸಮಾಜದ ಎಲ್ಲವರ್ಗಗಳಿಗೂ ಸೇರಿದ ನಾಲ್ಕುವರೆ ಸಾವಿರಕ್ಕೂ ಹೆಚ್ಚಾದ ಬಡಮಕ್ಕಳಿಗೆ ಉಚಿತವಾದ ವಸತಿ ಅಶನ ಹಾಗೂ ವಿದ್ಯಾಭ್ಯಾಸದ ಸೌಕರ್ಯಗಳನ್ನು ನಿರಂತರವಾಗಿ ಒದಗಿಸುವುದಕ್ಕೆ ಎಲ್ಲಿ ಸಾಧ್ಯವಾಗುತ್ತಿತ್ತು ?

ಓದುವ ವಿದ್ಯಾರ್ಥಿಗಳಿಗೇ ಅಲ್ಲದೇ ಸಿದ್ಧಗಂಗಾ ಕ್ಷೇತ್ರಕ್ಕೆ ಬರುವ ಪ್ರತಿಯೊಬ್ಬರಿಗೂ ಊಟೋಪಚಾರ ಮಾಡುವುದು ಸಂತೋಷದ ಕಾಯಕವಾಗಿ ಬಿಟ್ಟಿದೆ. ಯಾವ ವೇಳೆಯಲ್ಲೇ ಹೋಗಲಿ, ಅಲ್ಲಿ ದಾಸೋಹ ನಡದೇ ಇರುತ್ತದೆ. ನೂರಾರು ವರ್ಷಗಳ ಹಿಂದೆ ಹಚ್ಚಿದ ಅಡುಗೆಯ ಮನೆಯ ಒಲೆಯ ಬೆಂಕಿ ನಿರಂತರವಾಗಿ ಉರಿಯುತ್ತಲೇ ಇದೆ. ಬಂದವರೆಲ್ಲರ ಪ್ರಸಾದವನ್ನು ಸಿದ್ಧಪಡಿಸುವುದಕ್ಕಾಗಿ, ಹೀಗಾಗಿ ಸಿದ್ಧಗಂಗೆಯ ಶ್ರೀ ಮಠ ದಾಸೋಹದ ಮಠವೆಂದೇ ರೂಢಿಯಾಗಿಬಿಟ್ಟಿದೆ.

ಸ್ವಾಮಿಜಿಯವರನ್ನಾಗಲಿ, ಮಠದ ಮತ್ತಾವ ಹಿರಿಯರನ್ನೆ ಆಗಲಿ, ಕಂಡರೆ ಮೊದಲು ಅವರಿಗೆದುರಾಗುವ ಪ್ರಶ್ನೆ ಎಂದರೆ 'ಪ್ರಸಾದವಾಯಿತೆ ? 'ಇಲ್ಲ' ಎಂದಾದರೆ 'ಮೊದಲು ಪ್ರಸಾದವಾಗಲಿ' ಎಂಬುದು ಅಲ್ಲಿಯ ಬಿನ್ನಹ.

ಇಂಥ ದಾಸೋಹದ ಕ್ರಿಯೆ ಸುಗಮವಾಗಿಯೇ ನಡೆದಿದೆಯೆಂದೇನೂ ಅರ್ಥವಲ್ಲ
ಹಲವಾರು ದಿವ್ಯಗಳನ್ನದು ಹಾದು ಬಂದಿದೆ. ಉದಾಹಣೆಗೆ ಈ ಎರಡು ಪ್ರಸಂಗಗಳನ್ನು
ಗಮನಿಸಬಹುದು.

1966 ಕರ್ನಾಟಕದಲ್ಲಿ ಬಣ್ಣಿಸಲಾಗದಂಥ ಬರಗಾಲವಿದ್ದ ವರ್ಷ. ಹಣ
ಕೋಡುತ್ತೇನೆಂದರೂ ದವಸಧಾನ್ಯಗಳು ದೊರಕದಿದ್ದ ಕೇಡುಗಾಲ. ಸುತ್ತಮುತ್ತ
ಇದ್ದ ಗ್ರಾಮದವರೆಲ್ಲ ಕಂಗಾಲಾಗಿ ಹೋಗಿದ್ದರು. ಮಠದಲ್ಲಿ ಹೇಗೂ ದಾಸೋಹ
ನಡೆಯುತ್ತದೆ ಎಂದು ಎಲ್ಲರೂ ಮಠಕ್ಕೆ ಮೂಕೂರಿ ಬಿದ್ದರು. ಬರುವ ಯಾತ್ರಾರ್ಥಿ
ಗಳಿಗಿಂತ ಅಪಾರ ಸಂಖ್ಯೆಯಲ್ಲಿರುತ್ತಿದ್ದ ಈ ಜನರ ಹಸಿವನ್ನು ಕಾಣುವುದು ಕಷ್ಟವೇ
ಆದರೆ ಹೀಗೆ ಎಲ್ಲರೂ ಮಠಕ್ಕೆ ಊಟಕ್ಕೆಂದು ಬಂದು ಬಿಟ್ಟರೆ ಮಠದ ದಾಸೋಹ
ನಡೆಸುವುದಾದರೂ ಹೇಗೆ? ಮಠದ ಉಸ್ತುವಾರಿಯವರು ಸ್ವಾಮಿಗಳ ಬಳಿಗೆ ಬಂದರು
ನಿವೇದಿಸಿದರು. "ಸಿದ್ಧಗಂಗೆಗೆ ಯಾತ್ರಾರ್ಥಿಗಳಾಗಿ ಬರುವವರೇ ಅಲ್ಲದೆ ಸುತ್ತಮುತ್ತಲ
ಗ್ರಾಮದ ಬಡವರೆಲ್ಲ ಹೆಂಡಿರುಮಕ್ಕಳೊಡನೆ ಇಲ್ಲೇ ಬೀಡುಬಿಟ್ಟದ್ದಾರೆ. ಹೀಗಾದರೆ
ನಮ್ಮ ಗತಿಯೇನು? ಇರುವ ಉಗ್ರಾಣವೆಲ್ಲ ಹಲವಾರು ದಿನಗಳಲ್ಲಿಯೇ ಬರೀದಾದೀತು.
ಏನುಮಾಡಬೇಕು? ಸ್ವಾಮಿಜಿ ಎಲ್ಲವನ್ನೂ ಆಲಿಸಿದರು. ಒಂದು ಕ್ಷಣ ಕಣ್ಣು ಮುಚ್ಚಿ
ದರು. ಮರುಕ್ಷಣವೇ ಘೋಷಿಸಿದರು. ಬರಲಿ ಬಿಡಿ. ಈ ಮಠ ಇರುವುದೇ ಅವರಿಂದಲ್ಲವ
ಅವರಿಗಾಗಿಯೆ ಎಲ್ಲ ಬಳಕೆಯಾಗುವುದಾದರೆ ಆಗಲಿ ಬಿಡಿ. ಪ್ರಸಾದಕ್ಕಾಗಿ ಬಂದ
ಯಾರನ್ನು ಸಿದ್ಧಗಂಗೆ ತಡೆಯಬಾರದು. ಉದ್ದಾನ ಶಿವಯೋಗಿಗಳ ಕೃಪೆಯಿರುವ
ವರೆಗೊ ಈ ದಾಸೋಹ ನಡೆಯಲಿ. ಮಠದ ಪುಣ್ಯ. ಉದ್ದಾನಶಿವಯೋಗಿಗಳ ಕೃಪೆ.
ಮಠದ ಉಗ್ರಾಣದ ಸ್ಥಿತಿತಿಳಿಯುತ್ತಲೆ ಸುತ್ತಮುತ್ತ ಇದ್ದ ಗ್ರಾಮದ ಉಳ್ಳವರಿಂದ
ಮತ್ತೆ ನೆರವು ಹರಿದು ಬಂದಿತು. ದಾಸೋಹ ನಿರಂತರವಾಗಿ ನಡೆಯಿತು.

ಇನ್ನೊಂದು ಪ್ರಸಂಗ, ಒಂದು ದಿನ ಬೆಳಿಗ್ಗೆ, ಶಿವಪೂಜೆ ಮುಗಿಸಿ ಬಂದ
ಸ್ವಾಮಿಜಿಯವರು ಕಛೇರಿಯಲ್ಲಿ ಕುಳಿತಿದ್ದಂತೆ ಪರಿಚಿತರಾದ ಹಿರಿಯ ವಿದ್ವಾಂಸರ
ತಂಡವೊಂದು ಬಂದಿತು. ಸುಸಂಸ್ಕೃತರೂ ಪರಿಚಿತರೂ ಆದವರು ಬೆಳಗಾಗುತ್ತಲೇ
ಬಂದುದರಿಂದ ಶಿವಕುಮಾರಸ್ವಾಮಿಗಳ ಮನಸ್ಸು ಉಲ್ಲಸಿತವಾಯಿತು. ತಟ್ಟನೆ ತಮ್ಮ
ಕಾಲದ ಉತ್ತಮ ವಿದ್ವಾಂಸರು ಹಾಗೂ ಗುರುಗಳಾದ ಪ್ರೊ. ಎ. ಆರ್. ಕೃಷ್ಣಶಾಸ್ತ್ರಿ,
ಪ್ರೊ.ಟಿ.ಎಸ್. ವೆಂಕಣ್ಣಯ್ಯ, ಪ್ರೊ. ಮೆಕೆಂಟಾಶ್ ಇಂಥವರಪಾಠ ವೈಖರಿಯ ಸವಿಯ
ನೆನಪಿನಬುತ್ತಿಯನ್ನು ಬಿಚ್ಚಿದರು. ಅಷ್ಟರಲ್ಲಿಯೇ ಅಂದಿನ ವಾರ್ತಾ ಪತ್ರಿಕೆ ಬಂದಿತು.
ಅದರಲ್ಲಿ ಮೈಸೂರು ವಿಶ್ವವಿದ್ಯಾಲಯದ ಪರಿಕ್ಷೆಗಳನ್ನು ಹತ್ತು ದಿನಗಳಷ್ಟು ಮುಂದೂ-
ಡಿದ ಸುದ್ದಿ ಇತ್ತು. ತಟ್ಟನೆ ಸ್ವಾಮೀಜಿಯವರ ಮನಸ್ಸು ವಿದ್ಯಾರ್ಥಿಗಳ ಊಟ-
ವಸತಿಗಳ ಸಮಸ್ಯೆಯತ್ತ ಹೊರಟಿತು. ಇನ್ನೂ ಹತ್ತು ದಿನಗಳಷ್ಟು ಹೆಚ್ಚು ಅವಧಿಯಲ್ಲಿ

ಊಟ ವ್ಯವಸ್ಥೆಯಾಗಬೇಕಾಗಿದ್ದ ಕಡೆಗೆ ಅವರ ಗಮನ ಹರಿದು ಉದ್ದಾನೇಶನೇ ಗತಿ ಎಂದು ಒಂದೆರಡು ಕ್ಷಣ ಅಂತರಂಗದ ಮನದಾಳದಲ್ಲಿದ್ದಾಗ ಮಠದ ಕಾರುಭಾರಿ ಓಡೋಡಿ ಬಂದವನೇಸ್ವಾಮೀಜೀಗಳ ಕಾಲುಗಳಿಗೆ ಉರುಳಿಬಿದ್ದ. ಏನಾಯಿತು ಎಂದು ಸ್ವಾಮೀಜೀ ಕೇಳುವ ಮೊದಲೇ "ಬುದ್ಧಿ-ಇದೀಗ ದವಸ ಧಾನ್ಯ ತುಂಬಿದ ಲಾರಿಯೊಂದು ಬಂತು. ಹಿಂದೂಪುರದ ಭಕ್ತಾದಿಗಳಿದನ್ನು ಮಠಕ್ಕೆ ಕಾಣಿಕೆಯಾಗಿ ಸಲ್ಲಿಸಿದ್ದಾರೆ" ಎಂದು ನಿವೇದಿಸಿದ. ತಟ್ಟನೆ ಸ್ವಾಮೀಜಿಯವರ ಉದ್ಗಾರ. ಎಲ್ಲಾ ಉದ್ದಾನಪ್ಪನವರ ಕೃಪೆ. ನಿಜ, ತಪಸ್ಸಿನ ಮಹಿಮೆ ದಾಸೋಹದ ಹಿರಿಮೆ ಆ ಮಠದಲ್ಲಿರುವುದರಿಂದಲೇ ಇಂದಿಗೂ ಅಲ್ಲಿ ದಾಸೋಹಕ್ಕಾಗಿ ಹೊತ್ತಿಸಿದ ಒಲೆಯಬೆಂಕಿ ಆರದೇ ಉರಿಯುತ್ತಿರುವುದು.

ಸ್ವತಃ ಸಿದ್ದಗಂಗೆಯ ಮಠ ಹಾಗೂ ಬೆಂಗಳೂರಿನ ತೋಟದಪ್ಪನವರ ಧರ್ಮ ಛತ್ರಗಳಲ್ಲಿ ಊಟ-ವಸತಿಗಳ ಸೌಲಭ್ಯ ಪಡೆದು ಬಿ. ಎ. ಪದವಿ ಪಡೆದಿದ್ದ ಸ್ವಾಮೀಜಿಗಳಿಗೆ ಗ್ರಾಮಾಂತರ ಪ್ರದೇಶದ ಮಕ್ಕಳಿಗೆ ಉಚಿತ ಊಟ-ವಸತಿ ಸೌಕರ್ಯ ನೀಡುವುದರ ಮಹತ್ವ ಚೆನ್ನಾಗಿಯೇ ಮನವರಿಕೆಯಾಗಿತ್ತು. ಗ್ರಾಮಾಂತರ ಪ್ರದೇಶದ ಬಡಮಕ್ಕಳಿಗೆ ನೀಡುವ ಉಚಿತ ಊಟ-ವಸತಿಗಳ ಸೌಕರ್ಯವನ್ನವರು ಮಠ ಸಮಾಜಕ್ಕೆ ಸಲ್ಲಿಸಬೇಕಾದ ಋಣವೆಂದೇ ಭಾವಿಸಿದರು. ಎಲ್ಲಾ ಜಾತಿಯ ವಿದ್ಯಾರ್ಥಿಗಳಿಗೂ ಅಲ್ಲಿ ಆಶ್ರಯವಿತ್ತರು. ಅಷ್ಟೇ ಅಲ್ಲ ಪದವಿ ಶಿಕ್ಷಣದವರೆಗೂ ಈ ಸೌಲಭ್ಯವನ್ನವರು ವಿಸ್ತರಿಸಿದರು.

ಬೆಳೆಯುತ್ತಿರುವ ಜನ ಸಂಖ್ಯೆಯ ಅಗತ್ಯಕ್ಕೆ ತಕ್ಕಂತೆ ಶಿಕ್ಷಣ ಸಂಸ್ಥೆಗಳು ಇರಬೇಕಾದದ್ದನ್ನು ಸ್ವಾಮೀಜಿ ಮರೆಯಲಿಲ್ಲ. ಸಂಸ್ಕೃತ ಪಾಠಶಾಲೆಯನ್ನ ಕಾಲೇಜು ಮಟ್ಟದವರೆಗೂ ವಿಸ್ತರಿಸಿದರು. ಶಿಶು ವಿಹಾರದಿಂದ ಪ್ರೌಢ ಶಾಲೆಯವರೆಗೆ ಗ್ರಾಮಾಂತರ ಪ್ರದೇಶಗಳಲ್ಲಿ ವಿದ್ಯಾ ಸಂಸ್ಥೆಗಳನ್ನು ಆರಂಭಿಸಿದರು. ಸಿದ್ಧಗಂಗಾ ಶಿಕ್ಷಣ ಸಂಸ್ಥೆ ಹೀಗೆ 1962 ರಲ್ಲಿ ರೂಪುಗೊಂಡಿತು. 1963 ರಲ್ಲಿಯೇ ಗ್ರಾಮಾಂತರ ಜನರ ಔದ್ಯೋಗಿಕ ಶಿಕ್ಷಣ ಅಗತ್ಯಗಳನ್ನು ಮನಗಂಡು ಸಿದ್ಧಗಂಗಾ ತಾಂತ್ರಿಕ ಮಹಾ ವಿದ್ಯಾಲಯವನ್ನೂ (ಎಸ್.ಐ.ಟಿ.) ಸ್ಥಾಪಿಸಿದರು. ಪ್ರಥಮದರ್ಜೆ ಕಾಲೇಜುಗಳನ್ನು ತೆರೆದರು. ಕುರುಡು ಮಕ್ಕಳಿಗಾಗಿ ಶಿಕ್ಷಣ ಸಂಸ್ಥೆಯನ್ನು ತೆರೆದರು. ಶಿಕ್ಷಕರ ತರಬೇತಿ ಶಾಲೆಗಳೂ ಹಾಗೂ ಶಿಕ್ಷಣ ಮಹಾ ವಿದ್ಯಾಲಯಗಳನ್ನು ತೆರೆದರು. ಇಂದು ತುಮಕೂರು ಒಂದು ವಿಶ್ವ ವಿದ್ಯಾಲಯದ ಕೇಂದ್ರ ವಾಗುವಂತೆ ಸಮೃದ್ಧವಾಗಿದ್ದರೆ ಅದರ ಹಿಂದೆ ಸ್ವಾಮೀಜಿಯವರ ದೂರದರ್ಶಿತ್ವ ಹಾಗೂ ಕ್ಷಮತೆಗಳಿರುವುದನ್ನು ಯಾರಾದರೂ ಗಮನಿಸಬಹುದು.

ಹನ್ನೆರಡನೆಯ ಶತಮಾನದ ಶರಣರ ಚಳುವಳಿಯಾದ ನಂತರದಲ್ಲಿ ಶರಣ ಸಾಹಿತ್ಯದ ಪುನರುಜ್ಜೀವನ ಕಾರ್ಯ ಆರಂಭವಾದ ಕ್ಷೇತ್ರಗಳಲ್ಲಿ ತುಮಕೂರು ಜಿಲ್ಲೆ

ವಹಿಸಿದ ಪಾತ್ರ ಮಹತ್ತರವಾದುದು. ಯಡಿಯೂರು, ಶಿವಗಂಗೆ, ಗೂಳೂರು
ಗುಬ್ಬಿ ಹಾಗೂ ಸಿದ್ಧಗಂಗೆಗಳು ಇವುಗಳೆಲ್ಲ ಬಹು ಮುಖ್ಯವಾದವುಗಳು. ಯಡಿಯೂರು
ತೋಂಟದ ಸಿದ್ಧಲಿಂಗೇಶ್ವರರ ಪುಣ್ಯ ಕ್ಷೇತ್ರವಾಗಿದ್ದಂತೆ **ಸಿದ್ಧಗಂಗೆ ತೀರ್ಥಕ್ಷೇತ್ರವಾ**
ಇಂದು ಈ ಸಿದ್ಧಗಂಗೆಯಲ್ಲೊಂದು ಪುಟ್ಟ ಕ್ರಾಂತಿ ನಡೆಯುತ್ತಿದೆ. ಆ ಕ್ರಾಂತಿಯ
ಬೆಳಕಾಗಿರುವವರು ಶ್ರೀ ಮ. ನಿ. ಪ್ರ. ಸ್ವ. ಡಾ. ಶ್ರೀ ಶಿವಕುಮಾರಸ್ವಾಮಿಗಳವರು.

ಸೆಂಟ್ರಲ್ ಕಾಲೇಜಿನಲ್ಲಿ ಬಿ.ಎ. ಪದವಿ ಪಡೆದು 1930 ರಲ್ಲಿ ಸಿದ್ಧಗಂಗೆಯ
ಮಠಾಧ್ಯಕ್ಷರಾಗಿ ನಿಯೋಜಿತರಾದ ಸ್ವಾಮೀಜೀ ಆ ಕ್ಷೇತ್ರದ ಬಹುಮುಖ ವಿಕಾಸಕ್ಕಾಗಿ
ತಮ್ಮೆಲ್ಲ ಶಕ್ತಿಯನ್ನು ಧಾರೆಯರೆಯುತ್ತಲಿದ್ದಾರೆ. ಉದ್ದಾನ ಶಿವಯೋಗಿಗಳ ಕಾಲ
ದಲ್ಲಿ ನಡೆಯುತ್ತಿದ್ದ ದಾಸೋಹ ಬಡ ವಿದ್ಯಾರ್ಥಿಗಳ ಊಟ–ವಸತಿಗಳ ಸೌಲಭ್ಯಗಳನ್ನು
ಇಂದು ನೂರು ಪಟ್ಟು ಹೆಚ್ಚಿಸಿದ್ದಾರೆ. ಶಿವರಾತ್ರಿ ಹಬ್ಬದ ಸಂದರ್ಭದಲ್ಲಿ ನಡೆಯು
ತ್ತಿದ್ದ ಜಾತ್ರೆಯನ್ನು ಇಂದು ಸುತ್ತಮುತ್ತಣ ಹಳ್ಳಿಗಳ ಜನರ ಒಂದು ಸಾಂಸ್ಕೃತಿಕ
ಹಬ್ಬವಾಗಿ ರೂಪಿಸಿದ್ದಾರೆ. ಈ ಜಾತ್ರೆಯ ನೆಪದಲ್ಲಿ ಸೇರಿದ ಗ್ರಾಮಾಂತರ ಪ್ರದೇಶದ
ಜನರಿಗೆ ಕೃಷಿ ಹಾಗೂ ಗೃಹಕೈಗಾರಿಕೆಗಳ ಅಭಿವೃದ್ಧಿ ಇಲಾಖೆಗಳ ನೆರವಿನಿಂದ ವಿಶೇಷ
ವಾದ ಮಾಹಿತಿ ಹಾಗೂ ನೆರವು ಸೌಲಭ್ಯಗಳು ದೊರೆಯುವುದಕ್ಕೆ ಕಾರಣರಾಗಿದ್ದಾರೆ.

ಆರಂಭದ ದಿನಗಳಲ್ಲಿ ಹಳೆಯ ಮಠ ಮತ್ತು ಬೆಟ್ಟದಮೇಲಿನ ದೇವಾಲಯಗಳನ್ನು
ಬಿಟ್ಟರೆ ಇನ್ನಾವುದೇ ಕಟ್ಟಡಗಳಿರಲಿಲ್ಲ. ಆರ್ಥಿಕ ಸೌಕರ್ಯಗಳೂ ಇರಲಿಲ್ಲ. ಹೀಗಾಗಿ
ಸ್ವಾಮೀಜೀ ತಾವೇ ಅಲ್ಲಿ ಕಲ್ಲು ಹೊತ್ತಿದ್ದಾರೆ. ಸೌದೆ ಚಚ್ಚಿದ್ದಾರೆ. ವಿದ್ಯಾರ್ಥಿಗಳು
ಪ್ರೀತಿಯಿಂದ ಕಾಯಕದಲ್ಲಿ ಪಾಲುಗೊಳ್ಳಲು ಮಾರ್ಗದರ್ಶಕರಾಗಿದ್ದಾರೆ. ಕೆಲವು ಕಟ್ಟ
ಡಗಳ ಕಟ್ಟುವಿಕೆಯಲ್ಲಷ್ಟೇ ಅಲ್ಲ, ಜಾತ್ರೆಯ ಸಂದರ್ಭಗಳಲ್ಲಿ ಕೆಲವೊಮ್ಮೆ ಸೌದೆಯ
ಅಭಾವ ತಪ್ಪಿಸಲು ತಾವೇ ಕೊಡಲಿ ಹಿಡಿದು ಹೋದದ್ದುಂಟು. ಕುಯಿಲಿನ ನಂತರ
ಹೊಲ ಗದ್ದೆಗಳಲ್ಲಿ ಇಟ್ಟಿದ್ದ ಹುಲ್ಲನ್ನು ತಲೆಯ ಮೇಲೆ ಹೊತ್ತದ್ದುಂಟು. ನಿರಂತರವಾಗಿ
ಕಾರ್ಯಮಗ್ನರಾಗಿರುವುದು ಇಲ್ಲವೇ ಅಧ್ಯಯನಶೀಲರಾಗಿರುವುದು ಸ್ವಾಮೀಜಿಯ
ಸ್ವಭಾವವಾಗಿದೆ. ಬೆಳಗಿನ ಜಾವ 2-30 ಗಂಟೆಗೆ ಆರಂಭವಾಗುವ ಇವರ ದಿನಚರಿ
ರಾತ್ರಿ 10 ಗಂಟೆಯ ವರೆಗೂ ಬಿಡುವಿಲ್ಲದಿರುವುದುಂಟು.

1967 ರಲ್ಲಿ ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆ ಬಸ
ವಣ್ಣನವರ ದ್ವಿಶತಮಾನೋತ್ಸವ ಆಚರಿಸಿತು. ಅದರ ಬೆಳಗಿನ ಗೋಷ್ಠಿಯಲ್ಲಿ ನನ್ನ
ದೊಂದು ಪ್ರಬಂಧಮಂಡನೆಯಿತ್ತು. ಅಂದಿನ ಗೋಷ್ಠಿಯ ಅಧ್ಯಕ್ಷರು ಡಾ. ಶಿವಕುಮಾರ
ಸ್ವಾಮೀಜಿಯವರು. ಬಹುಶಃ ನಾನು ಆ ಗೋಷ್ಠಿಯ ಕೊನೆಯ ಪ್ರಬಂಧಕಾರ. ಮಾತನಾ
ಡಲು ಎದ್ದಾಗ ಅಧ್ಯಕ್ಷರ ಕಡೆಗೆ ನೋಡಿದೆ. ಬಾಗಿದ ತಲೆ, ಕಣ್ಣು ಮುಚ್ಚಿದ್ದರು, ಬಳ

ಲಿಕೆಯಿರಬಹುದೆಂದು ಭಾಷಣ ಆರಂಭಿಸಿದೆ. ನನ್ನ ಭಾಷಣದ ಅವಧಿ ಮುಗಿಯುತ್ತಿದ್ದಂತೆ ಅಧ್ಯಕ್ಷರ ಬೆರಳು ಚಲಿಸಿ ಗಂಟೆ ಸದ್ದು ಮಾಡಿತು. ನಾನು ಮಾತು ಮುಗಿಸುತ್ತಿದ್ದಂತೆ ಸ್ವಾಮೀಜಿ ಎದ್ದು ನಿಂತರು. ಮೂವರು ಪ್ರಬಂಧಕಾರರು ಹೇಳಿದ ಎಲ್ಲಾ ಮುಖ್ಯ ಅಂಶಗಳನ್ನು ಪ್ರಸ್ತಾಪಿಸಿ ಬಸವಣ್ಣನವರ ವ್ಯಕ್ತಿತ್ವವನ್ನು ಕುರಿತು ಅಸ್ಖಲಿತವಾಗಿ ನಿರೂಪಿಸುತ್ತಿದ್ದಾಗ ನನಗರಿವಾಯಿತು. ಅವರು ಕಣ್ಣು ಮುಚ್ಚಿದ್ದರೂ ನಿದ್ದೆಗಾಗಿ ಅಲ್ಲ ಎಂದು. ಶರಣ ನಿದ್ರೆಗೈದರೆ ಜಪಕಾಣಿರೋ "ಎನ್ನುತ್ತಾರೆ ಬಸವಣ್ಣನವರು ಬಹುಶಃ ಶರಣ ಸದಾ ಜಾಗೃತನಾಗಿ ಬಿಡುಗಣ್ಣವನಾಗಿ ಇರುವವನು ಎಂದೇ ಹಾಗೆ ಹೇಳಿರಬೇಕು. ಬಸವಣ್ಣನವರ ವಚನದ ಇನ್ನೊಂದು ಮುಖವೇ ಅಂದು ಹೊಳವಾಯಿತು.

1979ರಿಂದ ಸ್ವಾಮೀಜಿ ಗ್ರಾಮಾಂತರ ಬಸವಜಯಂತಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದಾರೆ. ಈ ವರೆಗೆ ಸುಮಾರು 320ಕ್ಕೂ ಹೆಚ್ಚು ಇಂತಹ ಜಯಂತಿ ಕಾರ್ಯಕ್ರಮಗಳು ನಡೆದಿವೆ. ರಸ್ತೆಯೇ ಇಲ್ಲದ ಎಷ್ಟೋ ಗ್ರಾಮಗಳಲ್ಲಿ ಇಂತ ಕಾರ್ಯಕ್ರಮಗಳು ನಡೆದಿವೆ, ಬಹುಶಃ ಬೆಂಗಳೂರು ಜಿಲ್ಲೆಯ ಮೋಟಗಾನಹಳ್ಳಿಯಲ್ಲಿ ಇರಬೇಕು, ಸ್ನೇಹಿತರ ಹೊಸ ವಾಹನದಲ್ಲಿ ನಾನು ಆಗ್ರಾಮಕ್ಕೆ ಹೋಗಿದ್ದೆ ಸುಮಾರ 10–15 ಕಿ.ಮಿ. ಗಳಷ್ಟು ರಸ್ತೆ ಎನ್ನುವಂತೆಯೇ ಇರಲಿಲ್ಲ; ಕಾರಿನಲ್ಲಿ ಪ್ರಯಾಣಿಸಿದರೂ ಜೋಡೆತ್ತಿನ ಬಂಡಿಯ ಪ್ರಯಾಣದಂತೆ ಪ್ರಯಾಸದ ದಾರಿ. ಆ ಒಂದು ದಿನದ ಪ್ರಯಾಸಕ್ಕೆ ನಾವು ಸಾಕಷ್ಟು ಪರಿಪಾಟು ಪಟ್ಟದ್ದುಂಟು. ಆದರೆ ಸ್ವಾಮೀಜಿ ಇಂತ ನೂರಾರು ಪ್ರವಾಸಗಳನ್ನು ತಮ್ಮ ಕರ್ತವ್ಯ ಎಂಬಂತೆ ಆನಂದವಾಗಿ ಮಾಡಿದ್ದಾರೆ.

ಗ್ರಾಮಾಂತರ ಬಸವಜಯಂತಿ ಎಂದರೆ ಅದು ಇಡೀ ಒಂದು ದಿನದ ಪೂರ್ಣ್ಯ ರೂಪದ ಕಾರ್ಯಕ್ರಮ. ಆಊರೆ ಅಲ್ಲದೆ ಸುತ್ತಮುತ್ತಲ ಗ್ರಾಮದವರಿಗೂ ಅಂದು ಅನ್ನದ ದಾಸೋಹ ಹಾಗೂ ಜ್ಞಾನದ ದಾಸೋಹ. ಬೆಳಿಗ್ಗೆ ಸುಮಾರು 10 ಗಂಟೆಗೆ ಕಾರ್ಯಕ್ರಮ ಆರಂಭವಾದರೆ ಮೊದಲ ಗೋಷ್ಠಿ ಮಧ್ಯಾಹ್ನ ಒಂದು ಗಂಟೆ ವರೆಗೆ. ಇಬ್ಬರು ಅಥವಾ ಮೂವರು ವಿದ್ವಾಂಸರಿಂದ ಬಸವಣ್ಣನವರನ್ನು ಕುರಿತು ಉಪನ್ಯಾಸಗಳು ಸ್ವಾಮಿಾಜಿಗಳದೇ ಅಧ್ಯಕ್ಷತೆ. ಮಧ್ಯೆ 1 ಗಂಟೆಯಿಂದ 3ರ ವರೆಗೆ ಊಟ ವಿರಾಮ. ಎಲ್ಲರಿಗೂ ದಾಸೋಹ. ಈ ಮಧ್ಯೆ ಸ್ವಾಮೀಜಿ ಭಕ್ತರೊಬ್ಬರ ಮನೆಯಲ್ಲಿ ಪೂಜೆ ಮುಗಿಸಿ ಮತ್ತೆ ಗೋಷ್ಠಿಗೆ ಹಾಜರು ? ಮತ್ತೆ 3 ರಿಂದ 6 ಗಂಟೆವರೆಗೆ ಎರಡನೆಯ ಗೋಷ್ಠಿ. ಇಬ್ಬರು ಮೂವರು ವಿದ್ವಾಂಸರ ಉಪನ್ಯಾಸವಾದ ಮೇಲೆ ಸ್ವಾಮೀಜಿಯವರ ಅಧ್ಯಕ್ಷಭಾಷಣ. ಒಂದು ಸಭೆಯಲ್ಲಿ ಹೇಳಿದ ವಿಷಯದ ಪುನರುಕ್ತಿ ಮತ್ತೊಂದು ಸಭೆಯಲ್ಲಿಲ್ಲ. ಅಂಥ ಬಸವಣ್ಣನವರನ್ನು ಕುರಿತು ಚಿಂತನ ಲಹರಿ. ಬಸವಣ್ಣ ಅವರ

ಬದುಕನ್ನೆಲ್ಲಾ ತುಂಬಿಕೊಂಡಂತೆ ಬಸವಾವೇಷವಾದಂತೆ ವಾಗ್ಝರಿ. ಅಲ್ಲಿ ಮಾತಿನ
ವಿದಾಯವಿಲ್ಲಾ. ಬಸವಣ್ಣನವರ ವ್ಯಕ್ತಿತ್ವವನ್ನು ಕುರಿತು ಅನ್ವೇಶಣೆ ಇರುತ್ತದೆ.
ಮತ್ತು ರಾತ್ರಿ 9 ಗಂಟೆಗೆ ಸ್ವಾಮೀಜಿಯವರೇ ರೂಪಿಸಿರುವ ಸಿದ್ಧಲಿಂಗೇಶ್ವರ ನಾಟಕ
ಮಂಡಲಿಯಿಂದ ಬಸವಣ್ಣನವರ ಬದುಕನ್ನು ಕುರಿತು ನಾಟಕ ಬೆಳಗಿನವರೆಗೂ ನಡೆ
ಯುವ ನಾಟಕಗಳ ಪ್ರಯೋಗಗಳನ್ನು ಸ್ವಾಮೀಜಿ ಬಿಟ್ಟಕಣ್ಣಾಗಿ ನೋಡುತ್ತಾರೆ.
ಜೊತೆಯವರೊಂದಿಗೆ ಚರ್ಚಿಸಿ ನಾಟಕದ ಅಭಿನಯ, ಹಾಗೂ ಸಾಹಿತ್ಯದಲ್ಲೇನಾ
ದರೂ ಮಾರ್ಪಾಡುಗಳಿದ್ದರೆ ಸೂಚಿಸುತ್ತಾರೆ. ಇಡೀ ನಾಟಕ ಮಂಡಲಿಯನಟರು
ಮತ್ತಾರೂ ಅಲ್ಲ. ಶ್ರೀ ಮಠದ ಅಧ್ಯಾಪಕರೂ ಹಾಗೂ ವಿದ್ಯಾರ್ಥಿಗಳೇ. ಚೆನ್ನಾಗಿ
ತರಬೇತಾದ ನಟರುಗಳೇ.

ಮತ್ತೆ ಶೌಚಾದಿಗಳನ್ನು ಮುಗಿಸಿ ಸ್ನಾನ ಪೂಜೆ ಮತ್ತು ದಿನದ ಕಾರ್ಯದ ಆರಂಭ
ವಿರಾಮ ಎಂಬುದಿಲ್ಲ. ಕಾರ್ಯದ ಬದಲಾವಣೆಯೇ ವಿರಾಮವಲ್ಲವೇ ? ಗಡಿಯಾರ
ದಂತೆ ಸದಾ ಕ್ರಿಯಾಶೀಲವಾದ ಚೈತನ್ಯ ಸ್ವಾಮಿಗಳದು. ಬಸವಜಯಂತಿಯ ನೆಪದಲ್ಲಿ
ಗ್ರಾಮಾಂತರ ಜನತೆಗೆ ಬಸವಣ್ಣನವರ ಬದುಕಿನ ಅರ್ಥವಂತಿಕೆ ಹಾಗೂ ಪ್ರಸ್ತುತೆಯನು
ತಿಳಿಸುವ ಹಂಬಲ ಸ್ವಾಮೀಜಿಯವರದು. ದೇವೇಂದ್ರ ತೀರ್ಥಂಕರರ ಬೋಧನೆಗೆ
ನೆರವಾಗುವುದಕ್ಕಾಗಿ ಸಮವತರಣ ಮಂಟಪ ನಿರ್ಮಿಸಿ ಕೊಡುತ್ತಾನಂತೆ, ಅದರಲ್ಲಿ
ಕುಳಿತು ತೀರ್ಥಂಕರ ಜನರಿಗೆ ಜ್ಞಾನಬೋಧೆ ನೀಡುತ್ತಾನಂತೆ. ಗ್ರಾಮಾಂತರ
ಬಸವಜಯಂತಿ ಅಂಥದೇ ಒಂದು ಪವಾಡ ಸದೃಶ ಯತ್ನವಾಗಿದೆ. ಸದ್ದಿಲ್ಲದೆ ವಿದ್ವಾಂ
ಸರುಗಳ ಭಾಷಣ, ಸ್ವಾಮೀಜಿಯವರ ಆಶೀರ್ವಚನ, ಅನಂತರ ಬಸವಣ್ಣನವರ ಬದುಕು
ಮತ್ತು ಸಂದೇಶಗಳನ್ನು ಕುರಿತು ನಾಟಕ. ಇಡೀ ದಿನ ಊರಿನ ಜನ, ಸುತ್ತಮುತ್ತ
ಲಿಂದ ಸೇರಿದ ಜನ ಬಸವಧ್ಯಾನದಲ್ಲಿ ಮುಳುಗಿರುವಂತಹ ಒಂದು ಅಲಭ್ಯ ಅವಕಾಶ
ಅದು.

ದೀರ್ಘ ದೇಹಿಗಳಾದ ಸ್ವಾಮೀಜಿ 87 ವಸಂತಗಳನ್ನು ದಾಟಿ ಮಾಗಿದಂತೆ
ಬಾಗಿದ್ದಾರೆ ನಿಜ. ಆದರೆ ದೃಢಕಾಯ ಆರೋಗ್ಯಕಾರರು ಆಗಿದ್ದಾರೆ, ಅದಕ್ಕೆ ಕಾರಣ
ಅವರ ಜೀವನ ವಿಧಾನ ಹಾಗೂ ಯೋಗ್ಯ, ತಪಸ್ಸು. ಅಧ್ಯಯನ ಚಿಂತನಗಳ ಮಧ್ಯೆ
ಬಿಡುವಿಲ್ಲದಂತೆ ಸಮಾಜದ ಸೇವೆಯನ್ನು ಪೂಜೆಯೆಂದು ಭಾವಿಸುವ ಬದುಕಿನ
ಒಂದು ರೀತಿ. ಶಿವ ಅವರಿಗೆ ಲೋಕ ಮುಖವಾಗಿರುವಂತೆ ಅವರು ಕಾರ್ಯ ಪ್ರವೃತ್ತ
ರಾಗಿರುತ್ತಾರೆ. ಕಾಯಕವೆಂದರೆ ಶಿವಕುಮಾರಸ್ವಾಮಿಗಳು. ಶಿವಕುಮಾರಸ್ವಾಮಿಜಿ
ಗಳೆಂದರೆ ಕಾಯಕ ಎನ್ನುವಂತ ವ್ಯಕ್ತಿತ್ವ ಅವರದು. ಸಿದ್ಧಗಂಗೆಯ ಬೆಳಕಾಗಿರುವ
ಸ್ವಾಮಿಜೀಯವರನ್ನು ಕಂಡರೆ ಹನ್ನೆರಡನೆಯ ಶತಮಾನಕ್ಕೆ ಕಾಲಿರಿಸಿದಂತಾಗುತ್ತದೆ.

ಪೂಜ್ಯ ಶ್ರೀ ಗಳವರ 85 ನೆಯ ಹುಟ್ಟು ಹಬ್ಬವನ್ನು ಆಚರಿಸ ಬೇಕೆಂದು ಸಮಾಜಭಾಂಧವರು ಹಾಗೂ ಭಕ್ತಾದಿಗಳು ಮುಂದಾದಾಗ ಅದು ಖಂಡಿತ ಅಗತ್ಯ-ವಿಲ್ಲ ಎಂದು ಖಂಡ ತುಂಡಾಗಿ ಹೇಳಿದವರು ಅವರು. ಅದಕ್ಕಾಗಿಯೇ ಈಗ ಈ ಹಬ್ಬ ವನ್ನು ಇನ್ನೊಂದು ರೀತಿಯಲ್ಲಿ ಆಚರಿಸುವ ಯತ್ನ ನಡೆದಿದೆ.

3500 ಜನರು ಒಟ್ಟಿಗೆ ಕುಳಿತು ಊಟ ಮಾಡಬಲ್ಲ ವಿಶಾಲವಾದ ಭೋಜನ ಶಾಲೆಯೊಂದು ಸಜ್ಜುಗೊಳ್ಳುತ್ತಿದೆ. ಜೊತೆಗೆ ಅತ್ಯಾಧುನಿಕವಾದ ಒಲೆಗಳು, ಅಡುಗೆಯ ಸಾಧನಗಳು ಸಿದ್ಧವಾಗುತ್ತಿವೆ. ಈ ಭೋಜನ ಶಾಲೆಯ ಜವಾಬ್ದಾರಿ ಈ ಮಠದ ಆಶ್ರಯದಲ್ಲಿರುವ ವಿದ್ಯಾರ್ಥಿಗಳ ಹಾಗೂ ಯಾತ್ರಾರ್ಥಿಗಳಾಗಿ ಬರುವ ಭಕ್ತಾದಿಗಳ ದಾಸೋಹ ಕೈಂಕರ್ಯ ನಡೆಸುವುದು.

ಸಿದ್ಧಗಂಗೆಗೆ ಪ್ರವೇಶಿಸುವಾಗ ಬಲ ಭಾಗದಲ್ಲಿ ಎದ್ದು ಕಾಣುವ ವಿನೂತನ ಶಿಲ್ಪವಾಗಿರುವ ಕಟ್ಟಡ–ಎರಡೂವರೆ ಸಾವಿರಕ್ಕೂ ಹೆಚ್ಚು ವಿದ್ಯಾರ್ಥಿಗಳಿಗೆ ಸಜ್ಜು-ಗೊಳಿಸಲಾದ ವಿದ್ಯಾರ್ಥಿ ನಿಲಯ. ಆರು ಕೋಟಿ ರೂಪಾಯಿಗಳಿಗೂ ಹೆಚ್ಚು ಹಣ. ಈ ಎರಡು ಕಟ್ಟಡಗಳಿಗಾಗಿ ವೆಚ್ಚವಾಗುತ್ತಿದ್ದು ಕೊಡುಗೈ--ದಾನಿಗಳಿಂದ ಇಂದು ರೂಪುಗೊಳ್ಳುತ್ತಿವೆ. ಪುಣ್ಯ ಕ್ಷೇತ್ರವಾಗಿ ಯಾತ್ರಾರ್ಥಿಗಳಿಗೆ ಹಾಗೂ ಭಕ್ತರಿಗೆ ಮಾತ್ರ ಆಕರ್ಷಣೆಯಾಗಿದ್ದ ಸಿದ್ಧಗಂಗೆ ಇಂದು ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಕೇಂದ್ರವೂ ಆಗಿ ನಾಡಿನ ಅಭಿಮಾನಕ್ಕೂ ಪಾತ್ರವಾಗುತ್ತಿದೆ. ಅದರ ಹಿನ್ನೆಲೆಯ ಶಕ್ತಿ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು.

---

**ಪ್ರೊ|| ಜಿ. ಎಸ್. ಸಿದ್ಧಲಿಂಗಯ್ಯ**

203, 7'ಎ' ಮುಖ್ಯ ರಸ್ತೆ, ವಿಜಯನಗರ 2ನೇ ಹಂತ, ಬೆಂಗಳೂರು–40.

---

ಗುರುವಚನದಿಂದಲ್ಲದೆ ಲಿಂಗವನರಿಯಬಾರದು. ಗುರುವಚನದಿಂದಲ್ಲದೆ ಜಂಗಮ ವನರಿಯಬಾರದು. ಗುರುವಚನದಿಂದಲ್ಲದೆ. ಪ್ರಸಾದವನರಿಯಬಾರದು. ಗುರುವಚನ ದಿಂದಲ್ಲದೆ ತನ್ನ ತಾನರಿಯಬಾರದು. ಹಿಂದಣ ಜನ್ಮದಲ್ಲಿ ಲಿಂಗವ ಪೂಜಿಸಿ ಇಂದು ಜ್ಞಾನೋದಯವಾದರೆ, ಗುರುವಿಲ್ಲದ ಮುನ್ನ ಅಯಿತ್ತೆನ್ನಬಹುದೇ? ತನ್ನಲ್ಲಿ ತಾನು ಸನ್ನಹಿತವಾದಹೆನೆಂದರೆ ಗುರುವಿಲ್ಲದೆ ಆಗದು ಕೇಳಾ. ಎನ್ನ ಅಜಗಣ್ಣನೆಂಬ ಗುರು ವಿಲ್ಲದೆ ಆರೂಢಿಯ ಕೂಟ ಸಮನಿಸದು ಕೇಳಾ.

– **ಮುಕ್ತಾಯಕ್ಕ**

---

# ಯುಗಾದಿ : ಹೊಸಬದುಕಿನ ಪಯಣ

--ಜಯತೀರ್ಥಾಚಾರ್ಯ ಮಳ

**ಬದುಕಿನ ಎಲ್ಲ ಹಂತಗಳಲ್ಲಿ ಅದರ ಪೂರ್ಣತೆಯೇ ಸಂವತ್ಸರ. ಒಂದು ಮುಗಿದ ಇನ್ನೊಂದುಸಂವತ್ಸರದ ಆರಂಭದ ಕಾಲವೇ ಯುಗಾದಿ. ಪುರೋಗಾಮಿ ಯಾದ ಋತುಗಳ ರಥಯಾತ್ರೆಯ ಆರಂಭವಿದು.**

**ಕಾಲ:** ಇದು ದೇವರ ಪ್ರತಿಮೆ. ಕಾಲ, ಸಮಯ, ಎಂದು ಆರಂಭವಾಯಿತು ಕಾಲ ಮುಗಿವುದೆಂದು ? ಅದರ ಹಿಂದೂ ಕಾಲವಿತ್ತು ಮುಂದೂ ಸಮಯ ಇದ್ದೆ ಇರುವದು. ಕಾಲ ಮುಗಿಯುವದಿಲ್ಲ. ಎಲ್ಲವನ್ನೂ ಮುಗಿಸಲು ಮಾಗಿಸುವದು. ಕಾಲಕ ತುದಿಮೊದಲಿಲ್ಲ. ಕಾಲ ನಿರಂತರ ಪ್ರವಾಹ. ಆದರೂ ನಿತ್ಯನೂತನ. ಅಷ್ಟೇ ಭಗವಂ ನಂತೆ ಶಾಶ್ವತ ಸನಾತನ. ಅಂತೆಯೇ ಕಾಲ ಇದು ದೇವರ ಪ್ರತಿಮೆ. ಯುಗಾ ಕಾಲದ ಒಂದು ಪೂರ್ಣ ಅವಧಿ. ಒಂದು ವರ್ಷವೆಂದರೆ ಬ್ರಹ್ಮಾಂಡದ ನೆಲೆವೆಣ್ಣ ಪಿಂಡಾಂಡದ ಈ ದೇಹ ಮಾಗುವ, ಚಕ್ರ ಪೂರೈಸಿದ ಕಾಲ. ಕಾಲದ ಒಂದು ವಷ ನಾವು ಸುತ್ತಿ ಬಂದ ಕಾಲ. ಸಂವತ್ಸರ ಇದು ಪೂರ್ಣತೆಗೆ ಒಂದು ಅಳತೆಗೋಲು ೩೬ ಇದು ಬೃಹತ್. ಪೂರ್ಣಪರಮಾತ್ಮನ ಸಂಕೇತ. ಅಂತಯೇ ೩೬೦ ಅಂ ವರ್ತುಲದ ಪೂರ್ಣತೆ, ೩೬೦ ದಿನ ಕಾಲಚಕ್ರದ ಪೂರ್ಣ ಅವಧಿ. ಬದುಕಿನ ಎಲ್ಲ ಹಂ ಗಳಲ್ಲಿ ಅದರ ಪೂರ್ಣತೆಯೇ ಸಂವತ್ಸರ. ಒಂದು ಮುಗಿದು ಇನ್ನೊಂದು. ಹೊ ಸಂವತ್ಸರದ ಆರಂಭದ ಕಾಲವೇ ಯುಗಾದಿ. ಅಂತೆಯೇ "ಯುಗ ಯುಗಗಳು ಕಳೆದರೂ ಯುಗಾದಿ ಮತ್ತೆ ಮರಳಿ ಬರುತಿದೆ.

ಜಗದೊಡೆಯ ಜಗನ್ನಾಥ ಈ ಜಗವನ್ನು ನಿರ್ಮಿಸಿದ ದಿನ ಯುಗಾದಿ. ಜೀವಿ ಗಳ ಬದುಕಿಗಾಗಿಯೇ ಜಡಜಗತ್ತಿನ ನಿರ್ಮಾಣ. ಈ ಜಗದಜೀವರ ಪಯಣ ಆರಂಭ ವಾದ ದಿನವೇ ಈ ಯುಗಾದಿ. "ಚೈತ್ರಮಾಸೆ ಜಗದ್ ಬ್ರಹ್ಮಾ ಸಸರ್ಜ ಪ್ರಥಮೇ ಹನಿ" ಚೈತ್ರಮಾಸದ ಶುಕ್ಲ ಪಕ್ಷದ ಸೂರ್ಯೋದಯದ ಸಂದರ್ಭದಲ್ಲಿ ಭಗವಂತ ಈ ಜಗತ್ತನ್ನು ಸೂಕ್ಷ್ಮದಿಂದ ಸ್ಥೂಲಗೊಳಿಸಿದ. ದ್ರವ್ಯಕ್ಕೆ ನಾಶವಿಲ್ಲ ಪರಿವರ್ತನೆ. ಇದೆ. ಜಗತ್ತಿಗೆ ಅಳಿವಿಲ್ಲ. ಬೆಳವಣಿಗೆ ಇದೆ. ಯುಗಾದಿ ಇದು ಈ ಜಗದ ವರ್ಧಂತಿ. ಈ ಜಗದ ಸಂರಕ್ಷಣೆಗಾಗಿ ಭಗವಂತ ಮೀನನಾಗಿ ಇಂದು ಅವತರಿಸಿದ. "ದದಾತಿ ಶಂ ಇತಿ 'ದಶ, ಜಗಕೆ ಸುಖ ಕೊಡುವದಕ್ಕಾಗಿ ದೇವರ ದಶ ಅವತಾರಗಳಲ್ಲಿ ಮೊದಲ ಅವತಾ ಇಂದೇ ಆಯಿತು. ಅಂತೆಯೇ ಇದು ಇತಿಹಾಸದಲ್ಲಿ ಮಹತ್ವದ ದಿನವಾಯಿತು. ಬದುಕಿನಲ್ಲಿ ಭಾವನಾಪೂರ್ಣ ಪವಿತ್ರದಿನ ಈ ಯುಗಾದಿ. "ಪ್ರವರ್ತಯಾಮಾಸ ತದಾ ಕಾಲಸ್ಯ ಗಣನಾಮಪಿ" ಭಾರತೀಯರ ಕಾಲಗಣನೆ ಇಂದೇ ಆರಂಭವಾದದ್ದು.

ಋತು ಇದು ರಥ. ವಸಂತಋತು ಇದೇ ಶುಕ್ರದ ಆರಂಭ, ಶಿಶಿರಕ್ಕೆ ಮುಕ್ತಾಯ. ಯುಗಾದಿಯಿಂದಲೇ ವಸಂತಋತುವಿನ ಪ್ರಾರಂಭ. ಆದ್ದರಿಂದ ಇದು ವರ್ಷದ ಮೊದಲದಿನ. ವೇದಕಾಲದ ಋಷಿಮುನಿಗಳಿಂದ ಆಚರಿಸಲ್ಪಟ್ಟ ದೊಡ್ಡ ಹಬ್ಬ. ಪುರೋಗಾಮಿಯಾದ ಋತುಗಳ ರಥ ಯಾತ್ರೆ ಇಂದು.

"ಪ್ರತಿಗ್ರಹಂ ಧ್ವಜಾಃ ಕಾರ್ಯಾಃ" ಇಂದು ಪ್ರತಿ ಮನೆಯ ಮುಂದೆ ಧರ್ಮ ಧ್ವಜವನ್ನು ಹಾರಿಸಬೇಕು. ಇದು ಆಧ್ಯಾತ್ಮಿಕ ಧ್ವಜವಂದನೆ.

"ಚೈತ್ರಾದೌ ಉಷಸಿಸ್ಮರನ್ ಮುರರಿಪುಂ ಚೋತ್ಥಾಯ ಶಾಂತಸ್ವರೇ
ವೃದ್ಧೋಕ್ತಿಃ ಪರಿಗೃಹ್ಯ ನಿಂಬಕದಲಂ ಪ್ರಾಶಾಜ್ಯ ಪಾತ್ರೇ ಸ್ವಕಂ
ವಕ್ತ್ರಂ ವೀಕ್ಷ್ಯ ಸುದರ್ಪಣೆ ಚ ಸುಹೃದಾ ಸ್ನಾತ್ವಾಸಮಂ ಭೂಷಿತಃ
ಶೃತ್ವಾ ವರ್ಷಫಲಂ ಪ್ರಿಯೈಃ ಸಹಮುದಾ ಭುಂಜೀತ ದೈವಜ್ಞಕೈಃ

ಚೈತ್ರದ ಆಗಮನಕಾಲ ಯುಗಾದಿ. ಮೊದಲದಿನದ ಸೂರ್ಯ ಬರುವುದಕ್ಕಿಂತ ಮುಂಚಿತವಾಗಿಯೇ ಏಳಬೇಕು. ಅದೇ ಉಷಃಕಾಲ. ಎಲ್ಲರೊಡನೆ ಎದ್ದು ದೇವರ ಸ್ಮರಣೆ ಮಾಡಬೇಕು. ಬದುಕಿನ ಆರಂಭ ಭಗವಂತನ ಸ್ಮರಣೆಯಿಂದಲೇ. ಆದರೆ ದೈವಬಲ ಒಲಿಯುವದು. ಬದುಕಿನ ಬೆಲೆ ಬೆಳೆಯುವದು. ಶಾಂತವಾದ ಸ್ವರದಲ್ಲಿ ಉದಯರಾಗ ರಾಗಜೀವನದ ನಾಂದಿ. ಪರಮಾತ್ಮನಲ್ಲಿ ಪ್ರೀತಿ ರಾಗದೊಂದಿಗೆ ಆರಂಭಿಸಿದ ದಿನ ಎಲ್ಲರನ್ನೂ ಪ್ರೀತಿ ರಾಗದಿಂದ ಕಂಡು, ಅನುಭವಿಸಿ ಬಾಳಲು ಮಾರ್ಗದರ್ಶಿ. ಅನುರಾಗದ ಬದುಕಿಗೆ ಉದಯರಾಗವೇ ಪ್ರೇರಕ ಆಧಾರ. ದೇವರು ಗುರುಗಳ ಸ್ತೋತ್ರಪಠಣ ಶರಣ ಜೀವನದ ಸಂಕೇತ. ಭಕ್ತನ ಸಾಧನ. ಇದನ್ನು ಪೂರೈಸಿ ಎಲ್ಲ ಹಿರಿಯರು, ಬಂಧು ಬಾಂಧವರಿಗೆ ವಂದಿಸಿ, ಪ್ರೀತಿಸಿ ಅನುರಾಗದ ಆಶೀರ್ವಾದ ಪಡೆಯಬೇಕು. ಅಭ್ಯಂಜನ, ಉತ್ಸಾಹ, ಸ್ನಾನ ಆಚರಿಸಿ ಬೇವು ಬೆಲ್ಲಗಳನ್ನು ಭಗವಂತನಿಗೆ ಅರ್ಪಿಸಬೇಕು. ಎಲ್ಲರೊಡನೆ ಬೇವು ಬೆಲ್ಲ ಸ್ವೀಕರಿಸಬೇಕು. ತುಪ್ಪದ ಪಾತ್ರೆಯಲ್ಲಾಗಲಿ, ಕನ್ನಡಿಯಲ್ಲಾಗಲಿ ತನ್ನ ಮುಖವನ್ನು ನೋಡಿಕೊಳ್ಳಬೇಕು. ಎಲ್ಲರ ಜೊತೆ ಕೂಡಿಕೊಂಡು ಹೊಸ ಬಟ್ಟೆಗಳನ್ನು ಉಟ್ಟುಕೊಂಡು ಸಂಭ್ರಮದಿಂದ ಇದ್ದು ವರ್ಷದ ಗ್ರಹಗತಿ, ಭವಿಷ್ಯ ಫಲಗಳನ್ನು ತಿಳಿಯಬೇಕೆಂದು ಶಾಸ್ತ್ರದ ವಿಧಾನ.

## ಉಪಯುಕ್ತ ಸಂದೇಶ

ಯುಗಾದಿಯ ಈ ತೆರೆದ ಆಚರಣೆಯ ಪ್ರತಿ ವಿಧಿ ವಿಧಾನಗಳ ಹಿನ್ನೆಲೆಯಲ್ಲಿಯೂ ಉಪಯುಕ್ತವಾದ ಸಂದೇಶವಿದೆ. ವಿಶಿಷ್ಟ ಭಾವನೆ ಇದೆ. ಜೀವನಕ್ಕೆ ಆದೇಶವಿದೆ. ಶಾಸ್ತ್ರದ ಉಪದೇಶವಿದೆ- ಬೇವು ತಂಪು. ಗ್ರೀಷ್ಮದಲ್ಲಿ ತಂಪಿಗಾಗಿ ಆರೋಗ್ಯಕ್ಕೆ ಬೇವು ಎಂದು ಆಯುರ್ವೇದ ಹೇಳಿದೆ. ಸುಖ-ದುಃಖಗಳ ಎಲ್ಲತರಹದ ದಿನಗಳಿಗೂ ಹೊಸ ವರ್ಷದ ಆರಂಭದಲ್ಲಿ ಸ್ವಾಗತವೆಂಬುದು ಶಾಸ್ತ್ರವೇದ.

ಈ ವರ್ಷದುದ್ದಕ್ಕೂ ಕಹಿಯಾದ ಬೇವಿನಂತಹ ಕಷ್ಟದ ದಿನಗಳೂ ಬರಬ
ಹುದು. ದುಃಖದ ಘಟನೆಗಳೂ ಘಟಿಸಬಹುದು. ಬೆಲ್ಲದಂತಹ ಸಿಹಿಯಾದ ಸುಖದ
ಘಟನೆಗಳಿಂದ ಕೂಡಿದ ದಿನಗಳೂ ಬರಬಹುದು. ಎಲ್ಲವೂ ನಮ್ಮ ಕರ್ಮಾನುಸಾರಿ
ಯಾದ ಭಗವಂತನ ಪ್ರಸಾದ. ಉದ್ವೇಗ ಉನ್ಮಾದಗಳಿಗೆ ಒಳಗಾಗದೇ ಇದೆಲ್ಲ ಪ್ರಸಾ
ದವೆಂಬ ಪವಿತ್ರ ಕಲ್ಪನೆಯಿಂದ ಸ್ವೀಕರಿಸಬೇಕು. ಇದೇ ಜೀವನದ ಸೂತ್ರ "ಬಂದ
ದ್ದೆಲ್ಲಾ ಬರಲಿ ಗೋವಿಂದನ ದಯೆಯೊಂದಿರಲಿ" ಎಂದು ವರ್ಷದುದ್ದಕ್ಕೂ ಬೇವಿನಂ
ತಹ ದಿನಗಳು ಬಂದರೂ ಸಹಿಸುವದು ಅಸಾಧ್ಯ. ಸುಖ ಸಿಹಿಗಳೂ ಕೂಡಿದಾಗ ಅವು
ಜೀವನಕ್ಕೆ ಪೂರಕವಾಗುವವು. ಬೇವಿದ್ದಾಲೇ ಬೆಲ್ಲದ ಬೆಲೆ ತಿಳಿಯುವದು. ದುಃಖಗ
ಳಿಂದಲೇ ಸುಖದ ಬೆಲೆ ಹರಿಯುವದು. ಇದರಿಂದ ಬದುಕಿನ ಬಗ್ಗೆ ಭರವಸೆ, ವಾಸ್ತವ
ಜೀವನದ ಅನುಭವ. ಜೀವನದಲ್ಲಿ ವಾಸ್ತವತೆಗೆ ಮನುಷ್ಯ ಅಂಟಿಕೊಳ್ಳುವದೇ ಧರ್ಮ!
ಇದೇ ತತ್ವಜ್ಞಾನ.

ತುಪ್ಪದಲ್ಲಿ ಕನ್ನಡಿಯಲ್ಲಿ ತನ್ನನ್ನು ತಾನು ನೋಡಿಕೊಳ್ಳಬೇಕು. ಇದೇ ಆತ್ಮ
ವಿಮರ್ಶೆ. ಆತ್ಮ ಚಿಂತನ. ತನ್ನ ಗುಣದೋಷಗಳನ್ನು ತಾನೇ ನಿರೀಕ್ಷಿಸುವ, ಪರೀಕ್ಷಿ
ಸುವ ಚಿಂತನ ಮಂಥನ. ಕಳೆದ ವರ್ಷದ ಗುಣದೋಷಗಳ, ಕರ್ತವ್ಯ ಕರ್ಮಗಳ,
ಸುಖ-ದುಃಖಗಳ ಲೆಕ್ಕ ಪತ್ರದ ಪರಿಶೋಧ. ಹೊಸ ವರ್ಷದ ಹೊಸ ಲೆಕ್ಕಗಳ ಆರಂಭ.
ಆತ್ಮ ವಿಮರ್ಶೆಯಿಂದ ಹೊಸ ನಿರ್ಧಾರ. ವರ್ಷ ವರ್ಷಕ್ಕೂ ತನ್ನ 'ಬೆಳವಣಿಗೆ' ಆವ
ರಿಸುತ್ತಿರುವ ಮುಪ್ಪಿನ ಅರಿವು ಮೂಡಿ ಮಾಡಬೇಕಾದ ಕರ್ತವ್ಯಗಳ ಬಗ್ಗೆ ಜಾಗೃತಿ
ಮೂಡಲು ನಮ್ಮನ್ನೇ ನಾವು ನೋಡಿಕೊಳ್ಳಬೇಕು. ನಮ್ಮನ್ನೇ ನಾವು ಅವಶ್ಯ ತಿಳಿಯ
ಬೇಕು. ದ್ವೇಷ, ಅಸೂಯೆಗಳನ್ನು ಮರೆತು ಎಲ್ಲರೊಡನೆ ಬೆರೆಯಲು ಊಟ, ಉಡು
ಗೆಯಲ್ಲಿ ಅನಿವಾರ್ಯವಾಗಿ ಪರಿವಾರದೊಡನೆ ಆಚರಿಸಲು ತಿಳಿಸಿದೆ.

ಹಿರಿಯರೊಡನೆ ಗೌರವದಿಂದ, ಬಂಧುಗಳೊಡನೆ ಪ್ರೀತಿಯಿಂದ, ದೇವರಲ್ಲಿ ಭಕ್ತಿ
ಯಿಂದ ಪರಮಾತ್ಮ ಮೆಚ್ಚುವಂತೆ ಬಾಳುವ ದಿನವೇ ಈ ಯುಗಾದಿ.

ಕಳೆದ ಕಾಲ ಎಷ್ಟು ವಿಶಾಲ! ದೇವ ಹುಟ್ಟಿಸಿದ ಈ ವಿಶ್ವ ಎಷ್ಟು ದೊಡ್ಡದು
ಗ್ರಹ ನಕ್ಷತ್ರ ಎಷ್ಟು ವಿಸ್ತಾರ ಪ್ರಪಂಚ, ಇದನ್ನೆಲ್ಲ ಜ್ಯೋತಿಷ್ಯ ಶಾಸ್ತ್ರದಿಂದ ಇಂದಿನ
ದಿನ ಅವಶ್ಯ ತಿಳಿದುಕೊಂಡು ಜಗತ್ತಿನಲ್ಲಿ ತನ್ನ ಸ್ಥಾನ ಮಾನಗಳನ್ನು ಗುರುತಿಸಿಕೊಳ್ಳು
ವಂತೆ ವರ್ಷದ ಭವಿಷ್ಯವೇನು, ರಾಜಕೀಯ ಸಾಮಾಜಿಕ ಸ್ಥಿತ್ಯಂತರಗಳನ್ನು ತಿಳಿದು
ಕೊಂಡು, ಭವಿಷ್ಯದ ಘಟನೆಗಳನ್ನು ಇಂದು ಅವಶ್ಯ ಅರಿಯಬೇಕೆಂದು ಶಾಸ್ತ್ರದ ವಿಧಾನ.
ಭಾರತೀಯರು ಎಷ್ಟು ಆದರ್ಶವಾದಿಗಳೋ ಅಷ್ಟೇ ಆಶಾವಾದಿಗಳು. ಅಂತೆಯೇ ಉತ್ಸವ
ಪ್ರಿಯರು. ಉತ್ಸಾಹಿಗಳು. ವರ್ಷವೆಲ್ಲ ಇದೇ ಸಂಭ್ರಮ, ಉತ್ಸಾಹ, ಉತ್ಸವಗಳಲ್ಲಿ
ಮುಂದುವರಿಯಲಿ ಎಂದೇ ನಾವೆಲ್ಲರೂ ಯುಗಾದಿ ಆಚರಿಸುವುದು.

---

**ಕೃಪೆ : ಸಂಯುಕ್ತ ಕರ್ನಾಟಕ.**

# ಅಕ್ಕನ ಅನುಭಾವ ಸಂಪತ್ತು

ಕನ್ನಡ ಸಾಹಿತ್ಯದ ಸಾರಸ್ವತ ಲೋಕಕ್ಕೆ ಹನ್ನೆರಡನೆಯ ಶತಮಾನದಲ್ಲಿದ್ದ ವಚನಕಾರರು ನೀಡಿದ ಅನುಭಾವ ಸಂಪತ್ತು ಮನುಕುಲಕ್ಕೇ ಒಂದು ವಿಶೇಷ ಕೊಡುಗೆ. ಬಸವಾದಿ ಪ್ರಮಥರ ಸಾಲಿನಲ್ಲಿ ಧೀರ ಶರಣೆಯಾಗಿ, ದಿಟ್ಟ ನಿಲುವಿನ ಮಹಾನ್ ಸ್ತ್ರೀ ಚೇತನವಾಗಿ ಬೆಳಗಿದ ಅಕ್ಕನ ಬದುಕು, ಇತಿಹಾಸದಲ್ಲೆ ಅಬಲೆಯರ ಪಾಲಿನ ಪ್ರಥಮ ಪ್ರತಿಭಟನೆಯ ಧ್ವನಿಯಾಗಿತ್ತು. ಮಧುರ ಭಾವದ ಸುಂದರ ವಚನ ಕಾರ್ತಿಯಾಗಿದ್ದ ಅಕ್ಕನ ಬಹುತೇಕ ವಚನಗಳಲ್ಲಿ ಎದ್ದು ಕಾಣುವ ಮುಖ್ಯ ಅಂಶಗಳೆಂದರೆ ಒಂದು ತೀರಾ ಸರಳವಾದ ಹಾಗೂ ನೇರವಾದ ನಿಷ್ಠೂರ ನುಡಿಗಳು, ಎರಡನೆಯದಾಗಿ ಭಕ್ತಿಪೂರ್ಣವಾದ ಅನುಭಾವದ ಕಲ್ಪನೆಗಳು. ಆಧ್ಯಾತ್ಮಿಕ ಚಿಂತನೆಗೆ ಜೀವ-ಆತ್ಮಗಳ ಕುಲಮತಗಳ ಹಂಗಿಲ್ಲವೆಂಬುದನ್ನು ಸಾಧಿಸಿ ತೋರಿಸಿದ ಸಾಧ್ವಿ ಶಿರೋಮಣಿಯಾಕೆ. ಡಾ|| ಎಂ. ಚಿದಾನಂದಮೂರ್ತಿಯವರು ಹೇಳಿರುವಂತೆ ಅಕ್ಕಮಹಾದೇವಿ ಎಂದು ಖ್ಯಾತಳಾಗಿರುವ ಮಹಾದೇವಿಯಕ್ಕ ವಚನ ಸಾಹಿತ್ಯಾಕಾಶದ ಉಜ್ವಲ ನಕ್ಷತ್ರ, ಶ್ರೇಷ್ಠ ಅನುಭಾವಿ, ತನ್ನ ಆದರ್ಶಕ್ಕಾಗಿ ಸಮಾಜಿಕ ವ್ಯವಸ್ಥೆ ಹಾಗೂ ರಾಜ ಪ್ರಭುತ್ವ ಎರಡನ್ನೂ ಏಕಕಾಲಕ್ಕೆ ಧಿಕ್ಕರಿಸಿ ನಿಂತವಳು, ಜೀವನವನ್ನು ಹೋರಾಟದಲ್ಲಿ ಕಳೆದವಳು, ವಚನ ಸಾಹಿತ್ಯಕ್ಕೆ ತನ್ನದೇ ಆದ ಕೊಡುಗೆಗಳನ್ನು ಕೊಟ್ಟು ಕನ್ನಡದ ಪ್ರಥಮ ಶ್ರೇಷ್ಠ ಕವಿತ್ರಿಯಾದಳು, ಹೆಣ್ಣುತನಕ್ಕೆ ಒಂದು ಗೌರವ ಭಾವನೆಯನ್ನು ತಂದುಕೊಟ್ಟು ಬಸವ ಅಲ್ಲಮ ಮೊದಲಾದವರಿಂದ ಸನ್ಮಾನಿತಳಾದವಳು. ಕನ್ನಡ ಸಾಹಿತ್ಯ ಅವಳಿಂದ ನಿಜವಾಗಿಯೂ ಶ್ರೀಮಂತವಾಯಿತು.

ಅಕ್ಕನ ಅನುಭಾವ ಸಂಪತ್ತನ್ನು, ಅರಿಯುವ ಮೊದಲು "ಅನುಭಾವ" ಎಂದರೇನೆಂಬುದನ್ನು ತಿಳಿಯುವುದು ಯುಕ್ತ. ಸಾಮಾನ್ಯ ಅರ್ಥದಲ್ಲಿ. ಅನುಭಾವ ಎಂಬ ಮಾತನ್ನು ಅನುಭವ ಎಂದೇ ಪರಿಭಾವಿಸುವುದುಂಟು. ಅದರೆ ಇದು ಬರಿಯ ಅನುಭಾವವಲ್ಲ, ಒಂದು ರೀತಿಯ ಆತ್ಮಾನುಭೂತಿ, ಅಪರೋಕ್ಷಾನುಭಾವ. ಕನ್ನಡ ನಿಘಂಟುಕಾರರು "ಅನುಭಾವವೆಂದರೆ ಭಗವಂತನನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವುದು, ಪರಮಾತ್ಮನೊಡನೆ ನೇರವಾದ ಸಂಪರ್ಕ ಪಡೆದುಕೊಳ್ಳುವುದು, ಎಂಬುದಾಗಿ ಅರ್ಥೈಸಿದ್ದಾರೆ. ಮಹರ್ಷಿ ಅರವಿಂದರು ಅನುಭಾವವನ್ನು ಕುರಿತು, ಸೃಷ್ಟಿಗೆ ಮೂಲ ಕಾರಣವಾದ ಸತ್ಯದ ಸ್ವರೂಪವನ್ನು ಪ್ರತ್ಯಕ್ಷವಾಗಿ ಕಾಣುವ, ಕೇಳುವ, ಸ್ಪರ್ಶಿಸುವ ಮತ್ತು ವಿವೇಚಿಸುವ ಶಕ್ತಿ ಎಂದಿದ್ದಾರೆ.

"ಅನುಭಾವ" ಎಂಬ ಪದಕ್ಕೆ ಸಂವಾದಿಯಾಗಿ ಆಂಗ್ಲ ಭಾಷೆಯಲ್ಲಿ ಮಿಸ್ಟಿಸಿಸಮ್ (Mysticism) ಎಂದು ಕರೆಯುತ್ತಾರೆ. ಇದು ನಿಕಟವಾಗಿರು ಎಂಬ

ಅರ್ಥವನ್ನು ಕೊಡುವ ಗ್ರೀಕ್ ಮೂಲಧಾತುವಿನಿಂದ ಬಂದಿರುವಂತೆ. ಪರಮಾ
ನೊಂದಿಗೆ ನಿಕಟವಾಗಿರುವುದನ್ನು ತಿಳಿಸುವ ಇದಕ್ಕೆ ರಹಸ್ಯಜ್ಞಾನ, ಪವಿತ್ರಜ್ಞಾ
ವೆಂದೂ ಕರೆಯುವುದುಂಟು. ಪರಮಾತ್ಮನು ಪೂಜೆಗೊಳ್ಳುವ ಹೊರಗಿನ ವಸ್ತುವ
ಉಳಿಯದೆ ನಿರಂತರವಾದ ಆಂತರಿಕ ಅನುಭವವಾಗುವಂತೆ ಸಾಗುವುದೇ ಇದರ ಗ
ಅತೀಂದ್ರಿಯ ಅನುಭವವನ್ನು ಪಡೆಯಬಲ್ಲ ಅಂತಃಸ್ಫುರಣೆ ಇಲ್ಲವೆ ಅನುಭಾವದಿ
ಸಾಧ್ಯವಾಗುತ್ತದೆ.

ಆಂಗ್ಲ ವಿಶ್ವಕೋಶ (Encyclopaedia)ದಲ್ಲಿ Mysticism ಎಂ
'It (Mysticism) appears in Connection with the enc
avour of human mind to grasp the devine essen
or the ultimate reality of thinks, and to enjoy t
blessedeness of actual communion with the highes
The fist is the philosophic side of mysticism, t
second its religions side. the first is theoretical
speculative, the second practical. ಈ ಮೇಲಿನ ಮಾತುಗ
ಧಾರ್ಮಿಕ ಹಾಗೂ ತಾತ್ವಿಕ ಎರಡು ಬಗೆಯ ಪರಿಶೀಲನೆ ಕಂಡುಬರುತ್ತದೆ. R. D
Ranade ಅವರು ತಮ್ಮ 'Mystcism in Maharastra ಎ
ಕೃತಿಯಲ್ಲಿ 'Mysticism denotes that attitude of min
which involves a direct, immediate, first hand intu
tive apprehension of god'. ಎಂದಿದ್ದಾರೆ. ಈ ಮಾತುಗಳನ್ನು ಪ
ಶೀಲಿಸಿದಾಗ 'ಪರಮಾತ್ಮ' ಜೀವಾತ್ಮ ಮತ್ತು ಇವುಗಳ ಸಂಬಂಧದಿಂದ ಉಂಟಾಗ
ಅಮೃತತ್ವ ಇವು ಮೂರು ಅನುಭಾವದ ಮೂಲ ತಳಹದಿಯಾಗಿರುವುದನ್ನು ನಾ
ಗುರುತಿಸಬಹುದು. ಇಲ್ಲಿ ಪರಮಾತ್ಮನೊಡನೆ ಸಮರಸಗೊಂಡು ಆತ್ಮೋನ್ನತಿಯನ
ಪಡೆಯಬೇಕೆಂಬ ಜೀವಾತ್ಮನ ನಿರಂತರ ಬಯಕೆಯನ್ನು ಕೈಗೂಡಿಸುವ ಸಾಧನ
ಅನುಭಾವವೆನ್ನಿಸಿ ಕೊಳ್ಳುತ್ತದೆ. ಈ ದಿಸೆಯಲ್ಲಿ [ಅನುಭಾವವನ್ನು] "ಅಂತರ
ದಲ್ಲಿರುವ ಶಕ್ತಿಗಳನ್ನು ಎಚ್ಚರಗೊಳಿಸಿ ಆ ಎಚ್ಚರದಿಂದ, ತೆರೆದ ಒಳಗಣ್ಣಿನಿ
ಸತ್ಯದ ಸ್ವರೂಪವನ್ನು ಪ್ರತ್ಯಕ್ಷವಾಗಿ ಸಾಕ್ಷಾತ್ಕರಿಸಿಕೊಳ್ಳುವುದನ್ನು ಅನುಭಾ
ವೆಂದು, ಹೇಳಿರುವ ಡಾ|| ಹೆಚ್. ತಿಪ್ಪೇರುದ್ರಸ್ವಾಮಿಗಳವರ ಮಾತು, 4 ಹೆ
ಅರ್ಥಪೂರ್ಣವಾಗಿದೆ. ಶರಣ ಸಾಹಿತ್ಯದ ಪರಿಕಲ್ಪನೆಯಲ್ಲಿ ಅನುಭಾವವನ್ನು ಷ
ಸ್ಥಲಗಳಿಗೆ ಹೊಂದಿಸಲಾಗಿದೆ. ಇಲ್ಲಿ ಒಂದೊಂದು ಸ್ಥಲದಲ್ಲಿಯೂ ಸಾಧಕನಾದವ
ಒಂದೊಂದು ಭಕ್ತಿಯನ್ನು ಆಶ್ರಯಿಸುತ್ತಾನೆ. 'ಭಕ್ತಿಸ್ಥಲದಲ್ಲಿ ಶ್ರದ್ಧಾಭಕ್ತಿ" ಮಹೇ
ಸ್ಥಲದಲ್ಲಿ ನೈಷ್ಠಿಕಾಭಕ್ತಿ, ಪ್ರಸಾದಿ ಸ್ಥಲದಲ್ಲಿ ಸಾವಧಾನ ಭಕ್ತಿ ಹೀಗೆ ಭಕ್ತಿಯ

ವಿಕಾಸಗೊಳ್ಳುತ್ತಾ ಬಂದು, ಪ್ರಾಣಲಿಂಗ ಸ್ಥಲದಲ್ಲಿ ಅನುಭಾವ ಭಕ್ತಿಯಾಗಿ ಪರಿಣಮಿಸುತ್ತದೆ. ಅಂದರೆ ಷಟ್‌ಸ್ಥಲದ ಆರಂಭದಿಂದ ಕೊನೆಯವರೆಗೂ ಭಕ್ತಿ ಅತ್ಯಾವಶ್ಯಕವಾಗಿದ್ದರೂ, ಸಾಧಕ ಬೆಳೆದಂತೆಲ್ಲಾ ಭಕ್ತಿಯು ಸ್ವರೂಪವೂ ವಿಕಾಸಗೊಳ್ಳುತ್ತಾ ಹೋಗುತ್ತದೆ. ಮುಂದೆ ಇದು ಶರಣ ಸ್ಥಲದಲ್ಲಿ ಆನಂದ ಭಕ್ತಿಯಾಗಿ ನಂತರ ಐಕ್ಯ ಸ್ಥಲದಲ್ಲಿ 'ಸಮರಸಭಕ್ತಿಯಾಗಿ' ಲಿಂಗಾಂಗ ಸಾಮರಸ್ಯದಲ್ಲಿ ಕೊನೆಗೊಳ್ಳುತ್ತದೆ.

ಅನುಭಾವವನ್ನು ಕುರಿತು ಬಹುತೇಕ ವಚನಕಾರರು ತಮ್ಮ ವಚನಗಳಲ್ಲಿ ಪ್ರಸ್ತಾಪಿಸಿರುವುದನ್ನು ನಾವು ಪರಿಶೀಲಿಸಬಹುದು. ಮೊದಲಿಗೆ ವಚನ ರಚನಾಗ್ರೇಶ್ವರ ಬಸವಣ್ಣನು ಅನುಭಾವವನ್ನು ಕುರಿತು.

"ಅನುಭಾವವಿಲ್ಲದ ಭಕ್ತಿ ಅನುವಿಂಗೆ ಬಾರದು;
ಅನುಭಾವವಿಲ್ಲದ ಲಿಂಗ ಸಮರಸ ಸುಖವನೀಯದು;
ಅನುಭಾವವಿಲ್ಲದ ಪ್ರಸಾದ ಪರಿಣಾಮ ಕೊಡದು. ಕೂಡಲಸಂಗಮ ದೇವಾ,
ನಿಮ್ಮ ಅನುಭಾವನ ಮಾತಿನ ಮಥನವೆನಬಹುದೆ ?" ೧ ಎಂದಿದ್ದಾನೆ.

ಶೂನ್ಯ ಸಿಂಹಾಸನಾದೀಶ್ವರ ಅಲ್ಲಮಪ್ರಭು ಅನುಭಾವವನ್ನು ಕುರಿತಂತೆ,
"ಅನುಭಾವದಿಂದ ಹುಟ್ಟಿತ್ತು ಲಿಂಗ;
ಅನುಭಾವದಿಂದ ಹುಟ್ಟಿತ್ತು ಜಂಗಮ;
ಅನುಭಾವದಿಂದ ಹುಟ್ಟಿತ್ತು ಪ್ರಸಾದ;
ಅನುಭಾವಿನಲ್ಲಿ ಗುಹೇಶ್ವರ ಲಿಂಗವನುಪಮ ಸುಖಿ. ೨ ಎಂದು ಹೇಳಿದ್ದಾನೆ.

ಇದೇ ದಾಟಿಯಲ್ಲಿ ಮುಂದುವರೆಯುವ ಮಹಾದೇವಿಯಕ್ಕನೂ ಕೂಡ ಅನುಭಾವವನ್ನು ಕುರಿತು,

"ಮರ ಮರ ಮಥನಿಸಿ ಕಿಚ್ಚುಹುಟ್ಟಿ
ಸುತ್ತಣ ತರುಮರಾದಿಗಳ ಸುಡಲಾತು;
ಆತ್ಮವಾತ್ಮ ಮಥನಿಸಿ ಅನುಭಾವ ಹುಟ್ಟಿ
ತನು ಗುಣಾದಿಗಳ ಸುಡಲಾಯಿತು;
ಇದು ಕಾರಣ, ನಿಮ್ಮ ಮಹಾನುಭಾವಿಗಳ
ಅನುಭಾವನ ತೋರಿ ಎನ್ನನುಳುಹಿಕೊಳ್ಳಾ, ಚನ್ನಮಲ್ಲಿಕಾರ್ಜುನಾ ೩ ಎಂದಿದ್ದಾಳೆ.

ಕೊನೆಯದಾಗಿ ಅನುಭಾವವನ್ನು ಕುರಿತಂತೆ ಸ್ವತಂತ್ರ ಸಿದ್ಧಲಿಂಗೇಶ್ವರನ ಈ ವಚನವನ್ನು ನೆನೆಯದಿದ್ದರೆ ತಪ್ಪಾದೀತೇನೊ.

"ಅನುಭಾವ ನೆಲೆಗೊಂಡಲ್ಲದೆ ಅಂಗಲಿಂಗದ ಹೊಲಬರಿಯಬಾರದು;
ಅನುಭಾವ ನೆಲೆಗೊಂಡಲ್ಲದೆ ಭಕ್ತಿ ವಿರಕ್ತಿನೆಲೆಗೊಳ್ಳದು;
ಅನುಭಾವ ನೆಲೆಗೊಂಡಲ್ಲದೆ ಜ್ಞಾನ ಸುಜ್ಞಾನದ ನೆಲೆಯ ಕಾಣಬಾರದು;
ಅನುಭಾವ ನೆಲೆಗೊಂಡಲ್ಲದೆ ತಾನು ದಾರೆಂಬುದು ತಿಳಿಯದು;
ಅನುಭಾವ ನೆಲೆಗೊಂಡಲ್ಲದೆ ತಾನು ತಾನಾಗಬಾರದು;
ಇದು ಕಾರಣ, ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರ,

ನಿಮ್ಮಾನುಭಾವದ ಅನುವಿನಲ್ಲಿಪ್ಪವರ ನೀವೆಂದೇ ಕಾಂಬೆನು" ಎಂದು ಘೋಷಿಸಿದ್ದಾ
ಹೀಗೆ ಅನುಭಾವದ ಹಿರಿಮೆಗಳನ್ನು ಕುರಿತು ಅನೇಕ ಶರಣರು ತಮ್ಮ ವಚನಗಳ
ಹಾಡಿದ್ದಾರೆ. ಈ ಹಿನ್ನೆಲೆಯಲ್ಲಿ ಅನುಭಾವ ಎಂಬ ಶಬ್ದವನ್ನು ಶರಣರು ಆಧ್ಯಾತ್
ಪ್ರಪಂಚಕ್ಕೆ ಕೊಟ್ಟ ಕಾಣಿಕೆ ಎಂಬ ಡಾ. ತಿಪ್ಪೇರುದ್ರಸ್ವಾಮಿಯವರ ಮಾತು ಒಪ್ಪ
ಕ್ಕದ್ದೆಸರಿ ಒಟ್ಟಾರೆ ಶರಣರ ಪರಿಕಲ್ಪನೆಗಳಲ್ಲಿ ಪರಿಭಾವಿಸುವುದಾದರೆ, ಅನುಭಾವವೆ
ಬುದು ತಮ್ಮ ಅರಿವಿನಿಂದ ಮತ್ತು ಅದರ ಆಚರಣೆಯಿಂದ ಪಡೆದ ಒಂದು ಬಗೆಯ
ವಿಶೇಷ ಅನುಭವವನ್ನು ನಿರ್ದೇಶಿಸುವಂತಹುದು ಎನ್ನಬಹುದು.

ಅಕ್ಕಮಹಾದೇವಿಯ ಬಗೆಗೆ ನಮಗೆ ಲಭ್ಯವಿರುವ ಸಾಹಿತ್ಯಕ ಹಾಗೂ ಚಾರಿತ್ರಿ
ಆಧಾರಗಳ ಮೂಲಕ ತರ್ಕಿಸಿದಾಗ, ಆಕೆ ಏರುಂಜವ್ವನೆಯಾಗಿದ್ದಾಗಲೆ. ಸಂಘರ್ಷಾ
ತ್ಮಕಬಾಳ್ವೆಯನ್ನು ನಡೆಸಬೇಕಾದದ್ದು ಅನಿವಾರ್ಯವಾಗಿತ್ತು. ಹದಿಹರೆಯದ
ಹೊಸ್ತಿಲಲ್ಲಿ ಇರುವಾಗಲೇ ಆಕೆ ಆಧ್ಯಾತ್ಮಕ್ಷೇತ್ರದ ಅನುಭಾವಿಯಾಗಿದ್ದವಳು. ಕಠೋರ
ಬುದುಕಿನ ನಡುವೆಯೂ ಒಂದೆಡೆ ಪ್ರಭುತ್ವವನ್ನೇ ಧಿಕ್ಕರಿಸಿದ್ದರೆ; ಮತ್ತೊಂದೆಡೆ ಹೆಣ್ಣಿ
ನಕ್ಕೆಸವಾಲಾಗಿದ್ದ ಸ್ತ್ರೀ ಮಿತಿಗಳಿಗೇ ತಿಲಾಂಜಲಿಯನ್ನು ಇತ್ತವಳು ಭಕ್ತಿ ಹಾಗೂ
ವೈರಾಗ್ಯದ ಛಲ ತೊಟ್ಟು ಶ್ರೀ ಗಿರಿಯ ಸೋಪಾನವನ್ನು ಏರಿದ್ದವಳು. ಹೀಗಾಗಿ ಅವಳ
ಜೀವನ ಹಾಗೂ ಸಾಧನೆ ಹೆಣ್ಣಿನ ಇಹಪರಗಳೆರಡರ ಸಾಧನೆಯ ಒಂದು ಮಹಾ ಪ್ರಕ
ರಣವೆ ಸರಿ. ಡಾ. ಸಿದ್ಧಯ್ಯಪುರಾಣಿಕ ಅವರು ಹೇಳಿರುವಂತೆ, "ಪರಮಾತ್ಮನನ್ನು
ಕಾಣುವ ಕಾತುರದಲ್ಲಿ ಕರಗಿ ಹೋದವರನೇಕ; ಕಂಡ ಕೆಲವರಲ್ಲಿ ತಾವು ಕಂಡ ದಿವ್ಯದ
ರ್ಶನವನ್ನು ಬಣ್ಣಿಸಿ ಹೋದವರು ಎಲ್ಲೋ ಅಪರೂಪ. ಅಂತಹ ಅತಿ ವಿರಳ ಅನುಭಾ
ವಿಗಳಲ್ಲಿ ಅಕ್ಕಮಹಾದೇವಿಯೂ ಒಬ್ಬಳು." ಹೀಗೆ ಮಲ್ಲಿಕಾರ್ಜುನನನ್ನು ಕಂಡು
ಎನ್ನ ಕಂಗಳ ಬರ ಹಿಂಗಿತು. ಎಂಬ ಅಕ್ಕನ ಅನುಭಾವದಿಂಗಿತವನ್ನು ಅವಳ ಜೀವನ
ದುದಕ್ಕೂ ಅವಳದೇ ಅಭಿವ್ಯಕ್ತಿಯ ವಚನಗಳಲ್ಲಿ ನಾವು ಕಾಣಬಹುದು, ಡಾ. ಬಸವ
ರಾಜ ಕಲ್ಲುಡಿಯವರು ಹೇಳಿರುವಂತೆ, "ಅಕ್ಕನ ವಚನಗಳ ದಾಟಿ ಹೆಚ್ಚು ಅಂತರ್ಮು
ಖವೆನಿಸುವಂಥದ್ದು. ಇಂಥ ಅಂತರ್ಮುಖದ ನೆಲೆಗಳೇ ಅನುಭಾವದ ಆಶಯಗಳನ್ನು
ಹೆಚ್ಚು ಪ್ರಮುಖವಾಗಿ ಎತ್ತಿ ತೋರಿಸುತ್ತವೆ"

ಅಕ್ಕನ ಬದುಕಿನ ರೂಪುರೇಷೆಗಳನ್ನು ಹೇಳುವಾಗ ಡಾ. ಎಂ. ಚಿದಾನಂದ ಮೂರ್ತಿಯವರು, ಅವಳ ಬದುಕನ್ನು ನಾಲ್ಕು ಘಟ್ಟಗಳಲ್ಲಿ ಗುರುತಿಸಿದ್ದಾರೆ. ಹುಟ್ಟಿನಿಂದ ತಾರುಣ್ಯದವರೆಗೆ ಅವಳು ಸುಂದರ ಕನಸುಗಳನ್ನು ಕಾಣುತ್ತಾ ಹಕ್ಕಿಯಂತೆ ಬದುಕಿದ ಕಾಲ ಇದು ಮೊದಲನೆಯ ಘಟ್ಟ; ಬಲವಂತದ ಮದುವೆಗೆ ಒಳಗಾಗಿ ಕೆಲಕಾಲ ತನಗೆ ಒಲ್ಲದ ಗಂಡನೊಡನೆ ಬಾಳುವೆಯನ್ನು ಮಾಡಿದ ಕಾಲ–ಇದು ಎರಡನೆಯ ಘಟ್ಟ; ಕೈ ಹಿಡಿದ ಗಂಡನ ಮನೆಯಿಂದ ಹೊರಬಂದರೂ ಏಕಾಂಗಿಯಾಗಿ ಅಲೆದಾಡುತ್ತ, ದುಷ್ಟರ ಕಾಮುಕರ ಕ್ರೂರ ಕಣ್ಣಿಗೆ ಒಳಗಾಗಿ ವೇದನೆಗೆ ಒಳಗಾದ ಕಾಲ–ಇದು ಮೂರನೆ ಘಟ್ಟ. ಕಲ್ಯಾಣದಲ್ಲಿ ಬಸವ ಅಲ್ಲಮರಂತಹ ಭಕ್ತರಿಂದ ಸಾಂತ್ವನ ಸಮಾಧಾನ ಪಡೆದು, ಮನಸ್ಸಿನ ಬೇಗುದಿಯನ್ನು ಕಳೆದುಕೊಂಡು, ಬಳಿಕ ಶ್ರೀಶೈಲಕ್ಕೆ ಬಂದು ತನ್ನ ಕೊನೆಯದಿನಗಳನ್ನು ಚೆನ್ನಮಲ್ಲಿಕಾರ್ಜುನನ ಸಾನ್ನಿಧ್ಯದಲ್ಲಿ ಕಳೆದದು ನಾಲ್ಕನೆಯ ಘಟ್ಟ. ಪ್ರಸ್ತುತ ಈ ನಾಲ್ಕು ಘಟ್ಟಗಳಲ್ಲೂ ಅಕ್ಕನ ಅನುಭಾವದ ವ್ಯವಹಾರವನ್ನು ಸೂಕ್ಷ್ಮವಾಗಿ ಪರಿಶೀಲಿಸುವುದೇ ಇಲ್ಲಿನ ಮುಖ್ಯ ಉದ್ದೇಶ.

ತಾರುಣ್ಯಾವಸ್ಥೆಗೆ ಕಾಲಿಡುವ ಪೂರ್ವದಿಂದಲೇ ಅಕ್ಕನಿಗೆ ಅನುಭಾವದ ನೆಲೆಯ ಸುಂದರ ಕನಸುಗಳು ಗರಿಗಟ್ಟಿದ್ದುವು. ಅವಳ ವಚನಗಳಲ್ಲಿ ಭಾವ ತೀವ್ರತೆಯ ಜೊತೆಗೆ ನಿಷ್ಕಾಮ ಪ್ರೇಮ ನೆಲೆಯೂರಿದ್ದುದನ್ನು ನಾವು ಗುರುತಿಸಬಹುದು.

"ಅಕ್ಕ ಕೇಳವ್ವ ಅಕ್ಕಯ್ಯ, ನಾನೊಂದು ಕನಸ ಕಂಡೆ
ಅಕ್ಕಿಯಡಕೆ, ಓಲೆ ತೆಂಗಿನಕಾಯ ಕಂಡೆ!
ಚಿಕ್ಕ ಚಿಕ್ಕ ಜಡೆಗಳ ಸುಲಿಪಲ್ಲ ಗೊರವನು
ಭಿಕ್ಷಕ್ಕೆ ಮನೆಗೆ ಬಂದುದ ಕಂಡೆ!
ಮಿಕ್ಕು ಮೀರಿ ಹೋದನ ಬೆಂಬತ್ತಿ ಕೈವಿಡಿದೆನು,
ಚೆನ್ನಮಲ್ಲಿಕಾರ್ಜುನಯ್ಯನ ಕಂಡು ಕಣ್ತೆರೆದೆನು" ||೫||

ಇಲ್ಲಿ ಅವಳ ಸುಂದರ ಕನಸಿನ ಕಲ್ಪನಾಲೋಕದ ಜೊತೆಗೆ, ಆಧ್ಯಾತ್ಮಿಕ ವ್ಯವಹಾರದ ಭಾವಪೂರ್ಣ ಅನುಸಂಧಾನದ ತಂಗಾಳಿ ಬೀಸಲಾರಂಭಿಸಿದೆ. ಈ ವೇಳೆಗಾಗಲೆ ಅವಳು ತನ್ನ ಕಾರಣ ತನುವನ್ನು ಮನೋಮಯ ಜಗತ್ತಿನ ಅಜ್ಞಾತ ಒಡೆಯನೊಂದಿಗೆ ಸಮೀಕರಿಸುವ ಹಂತದಲ್ಲಿದ್ದಳು. ಹೀಗೆ ಮುಂದುವರೆಯುವ ಅಕ್ಕನ ಅನುಭಾವದ ಕನಸುಗಳು ಮುಂದೆ ಮತ್ತೊಷ್ಟು ದೃಢಗೊಳ್ಳುತ್ತಾ ಸಾಗುತ್ತವೆ.

"ಹೊಳೆವ ಕೆಂಜಡೆಗಳ, ಮಣಿಮಕುಟ ಸುಲಿಪಲ್ಲ,
ನಗೆಮೊಗದ ಕಂಗಳ ಕಾಂತಿಯಂ; ಈರೇಳು ಭುವನಮಂ ಬೆಳಗುವ,
ದಿವ್ಯಸ್ವರೂಪನ ಕಂಡೆ ನಾನು, ಕಂಡೆನ್ನ ಕಂಗಳ ಬರ ಹಿಂಗಿತ್ತೆಂದು
ಗಂಡ ಗಂಡರೆಲ್ಲ ಹೆಂಡ ಹೆಂಡಿರಾಗಿ ಆಳುವ ಗುರುವನ ಕಂಡೆ ನಾನು

ಜಗದಾದಿ ಶಕ್ತಿಯೊಳು ಬೆರಸಿ ಒಡನಾಡುವ ಪರಮಗುರು
ಚೆನ್ನಮಲ್ಲಿಕಾರ್ಜುನನ ನಿಲವ ಕಂಡು ಬದುಕಿದೆನು" ||೬||

ಅವಳ ಕಲ್ಪನಾ ತೋಟದಲ್ಲಿ ರೂಪುಗೊಳ್ಳುವ ಆ ದಿವ್ಯ ಸ್ವರೂಪವನ್ನು ಕಂಡಾ ಆಕೆಯ ಕಂಗಳ ಬರ ಹಿಂಗಿತ್ತಂತೆ. ಆ ಮಹಾ ಮೂರ್ತಿಯ ಮೇಲೆ ಅವಳಿಗೆ ಎಲ್ಲಿಲ್ಲ ಭಕ್ತಿ ಗೌರವ. ಹೀಗೆ ಸಹಜ ಬದುಕಿನ ಆಚೆಗೂ ಇರುವ, ಅಜ್ಞಾತ ನೆಲೆಗಳ ತಾನು ಅನುಭವಿಸಿದ ಸುಂದರ ರಸನಿಮಿಷಗಳನ್ನು ತನ್ನ ವಚನಗಳ ಮೂಲ ಅಭಿವ್ಯಕ್ತಿಸಿದ್ದಾಳೆ. ಇಂತಹ ಪರಿಕಲ್ಪನಾ ಪ್ರಪಂಚದಲ್ಲಿ ಅವಳ ಭಾವನೆಗ ಮತ್ತೊಷ್ಟು ಗಟ್ಟಿಗೊಳ್ಳುತ್ತಾ ಮುಂದುವರೆಯುತ್ತವೆ.

"ಎನ್ನ ಮನವ ಮಾರುಗೊಂಡನವ್ವ,
ಎನ್ನ ತನುವ ಸೂರೆಗೊಂಡನವ್ವ,
ಎನ್ನ ಸುಖವನಪ್ಪಗೊಂಡನವ್ವ,
ಎನ್ನಿರವ ನಿಂಬುಗೊಂಡನವ್ವ,
ಚೆನ್ನಮಲ್ಲಿಕಾರ್ಜುನನ ಒಲುಮೆಯವಳಾನು" ||೭||

ಇಂತಹ ಮಾತುಗಳನ್ನು ಗಮನಿಸಿದಾಗ ಅಕ್ಕನ ಅನುಭಾವದ ತೀವ್ರತೆ ದಿನೇ ದಿ ಮರವನಪ್ಪುವ ಬಳ್ಳಿಯಂತೆ ವ್ಯಾಪಿಸುವುದನ್ನು ನಾವು ಕಾಣಬಹುದು. ಈ ಹಂತದ ಜೀವಾತ್ಮ-ಪರಮಾತ್ಮರ ಅನುಸಂಧಾನದ ಪ್ರಾಥಮಿಕ ನೆಲೆಗಳು ಗುರುತಿಸಲ್ಪಡುತ್ತವೆ ಇಂಥವೇ ನೆಲೆಗಳನ್ನು ಗುರುತಿಸಲ್ಪಡುವ ಇನ್ನೊಂದು ವಚನ ದೃಷ್ಟಾಂತವನ್ ನೋಡುವುದರ ಮೂಲಕ ಮೊದಲನೆಯ ಘಟ್ಟದ ಪರಾಮರ್ಶೆಯನ್ನು ಮುಕ್ತಾಯ ಗೊಳಿಸಬಹುದು.

"ಕಾಣುತ್ತ ಕಾಣುತ್ತ ಕಂಗಳ ಮುಚ್ಚಿದೆ ನೋಡವ್ವ;
ಕೇಳುತ್ತ ಕೇಳುತ್ತ ಮೈಮರೆದೊರಗಿದೆ ನೋಡವ್ವ;
ಹಾಸಿದ ಹಾಸಿಗೆಯ ಹಂಗಿಲ್ಲದೆ ಹೋಯಿತ್ತು ಕೇಳವ್ವ;
ಚೆನ್ನಮಲ್ಲಿಕಾರ್ಜುನ ದೇವನು ಕೂಡುವ ಕೂಟದ ಪರಿಯ
ನಾನೇನೆಂದರಿಯದೆ ಮರೆದೆ ಕಾಣವ್ವ" ||೮||

ಹೀಗೆ ವಯೋಧರ್ಮಕ್ಕೆ ಅನುಗುಣವಾಗಿ ಸುಂದರ ಕನಸುಗಳನ್ನು ಕಾಣುವುದು ಸಹಜ. ಆದರೆ ತನ್ನ ಕಲ್ಪನಾಲೋಕದ ಅಸಹಜ ನೆಲೆಯಲ್ಲಿ ನಿಂತು ಅನುಭಾವದ ತೀವ್ರತೆಯನ್ನು ಸವಿದು, ಆ ಅನುಭವವನ್ನು ಅರಿತೂ ಅರಿಯದಂತೆ ಸುಖಿಸುವ ಅವಳ ಭ್ರಾಮಕ ನೆಲೆಯ ಜಗತ್ತು, ಆಕೆಯ ಅಧ್ಯಾತ್ಮ ಸಾಧನೆಯ ಸೋಪಾನವೆನ್ನಬಹುದು ಇದು ಅಕ್ಕನ ವಯಸ್ಸಿಗೆ ಮೀರಿದ ಶಿವಸಾಕ್ಷಾತ್ಕಾರದ ಮೊದಲನೆಯ ಘಟ್ಟವೂ ಹೌದು.

ಎರಡನೆಯ ಘಟ್ಟದಲ್ಲಿ ಅಕ್ಕ ಕೌಶಿಕನ ಅರಮನೆಯಲ್ಲಿ ಬಂದಿಯಾಗಿದ್ದ ಸಂದರ್ಭದಲ್ಲಿ ಮೂಡಿ ಬಂದಿರಬಹುದಾದ ಕೆಲವು ಅನುಭಾವದ ನೆಲೆಗಳನ್ನು ವಿವೇಚಿಸಬಹುದು. ಆಕೆಯ ಜೀವನದಲ್ಲಿ ಇದೊಂದು ಒತ್ತಡದ ಸಂದರ್ಭ. ತನ್ನ ಹೆಣ್ತನದ ಪೂರ್ಣ ಸ್ವಾತಂತ್ರ್ಯಕ್ಕೆ ಇಲ್ಲಿ ಅವಕಾಶವಿರಲಿಲ್ಲ. ಅವಳ ದೈಹಿಕ ಹಾಗೂ ಮಾನಸಿಕ ವೇದನೆಗಳು ಅವಳದೇ ವಚನಗಳಲ್ಲಿ ಹೀಗೆ ನಿವೇದನೆಗೊಳ್ಳುತ್ತವೆ.

"ಸಾವಿಲ್ಲದ ಕೇಡಿಲ್ಲದ ಚೆಲುವಂಗಾನೊಲಿದೆನವ್ವ !
ಎಡೆಯಿಲ್ಲದ ಕಡೆಯಿಲ್ಲದ, ತೆರಹಿಲ್ಲದ ಕುರುಹಿಲ್ಲದ ಚೆಲುವಂಗಾನೊಲಿದೆನವ್ವ!
ಭವವಿಲ್ಲದ ಭಯವಿಲ್ಲದ ನಿಸ್ಸೀಮ ಚೆಲುವಂಗಾನೊಲಿದೆ
ಇದು ಕಾರಣ ಚೆನ್ನಮಲ್ಲಿಕಾರ್ಜುನ ಗಂಡನೆನಗೆ
ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು ತಾಯೆ" ||೯||

ಇಲ್ಲಿ ಬಹಿರಂಗವಾಗಿಯೇ ಕೌಶಿಕನನ್ನು ನಿರಾಕರಿಸುವ ಅಕ್ಕ, ಅಂತರಂಗದಲ್ಲಿ ಈಗಾಗಲೇ ನಿಸ್ಸೀಮ ಚೆಲುವನನ್ನು ಮನಸಾರೆ ವರಿಸಿದ್ದಾಳೆ. ಅವಳ ಈ ಅನುಬಂಧ ನಿಷ್ಕಾಮ ಜಗತ್ತಿನ ಮನೋಮಯ ವ್ಯವಹಾರದ್ದು. ಯಾವ ಸಿರಿ, ಸಂಪದಗಳೂ ಅವಳಿಗೆ ತೃಣ ಸಮಾನ. ಲೋಕದ ಗಂಡರೆಲ್ಲ ಅವಳ ದೃಷ್ಟಿಯಲ್ಲಿ ನಶ್ವರರು. ಅಸದೃಶ ವ್ಯಕ್ತಿತ್ವವುಳ್ಳ. ಅಕಾರತೀತವಾದ, ಅಗೋಚರ ಸಾಮ್ರಾಜ್ಯದ ನಿಸ್ಸೀಮ ಚೆಲುವ ನೊಂದಿಗೆ ಇವಳಮನ ವಿಹರಿಸುತ್ತದೆ. ತಾರುಣ್ಯ ಪೂರ್ವದ ಸುಂದರ ಕನಸುಗಳಿಗೆ ಈಗ ಮತ್ತೊಷ್ಟು ಗರಿಮೂಡಿದಂತಾಗಿದೆ. ತನ್ನ ಅಂತರಂಗದ ವ್ಯವಹಾರದಲ್ಲಿ ಪ್ರಗತಿಯ ಹಂತವನ್ನು ಏರತೊಡಗಿದ್ದಾಳೆ. ಇಂತಹ ನಿಷ್ಕಾಮಿ, ಅನುಭಾವಿ ಅಕ್ಕ ನನ್ನು ಕೌಶಿಕ ಅರ್ಥಮಾಡಿಕೊಳ್ಳುವುದಿರಲಿ. ಕಾಡದೆ ಬಿಟ್ಟಿರಲಿಕ್ಕಿಲ್ಲ! ಅಕ್ಕ ತಾನು ಇಂತಹ ಪರಿಸ್ಥಿತಿಯ ಒತ್ತಡಗಳಿಂದ ನುಡಿದ ಅನುಭವದ ಮಾತುಗಳು, ಅನುಭಾವದ ನೆಲೆಯ ಒಳಗೇ ಇರುವುದನ್ನು ಗಮನಿಸಬಹುದು.

"ಅಂಗದ ಭಂಗವ ಲಿಂಗಸುಖದಿಂದ ಗೆಲಿದೆ,
ಮನದ ಭಂಗವ ಅರುಹಿನ ಮುಖದಿಂದ ಗೆಲಿದೆ,
ಜೀವದ ಭಂಗವ ಶಿವಾನುಭವದಿಂದ ಗೆಲಿದೆ,
ಕರಣದ ಕತ್ತಲೆಯ ಬೆಳಗನುಟ್ಟು ಗೆಲಿದೆ,
ಜವ್ವನದ ಹೊರಮಿಂಚಿನಲ್ಲಿ ನಿಮ್ಮ ಕಣ್ಣಿಂಗೆ ತೋರುವ
ಕಾಮನ ಸುಟ್ಟುರುಹಿದ ಭಸ್ಮವ ನೋಡಯ್ಯಾ!
ಚೆನ್ನಮಲ್ಲಿಕಾರ್ಜುನ ಕಾಮನ ಕೊಂದು ಮನಸಿಜನಾಗುಳುಹಿದರೆ
ಮನಸಿಜನ ತಲೆಯ ಬರಹ ತೊಡೆದೆನು" ||೧೦||

ಈ ವಚನದ ಮಾತುಗಳು ಅವಳ ಅಂತರಂಗದ ಸಂಘರ್ಷದಿಂದ ಹೊರಬಂದಂತಹ
ಮಹಾತ್ಮರೂ ಅನುಭಾವಿಗೂ ಆಗಿದ್ದವರಿಂದ ಮಾತ್ರ, ಇಂತಹ ಸಂಧಿಗ್ದಗಳಲ್ಲಿ
ಉತ್ತಮ ನಡೆಯನ್ನೂ ಶ್ರೇಷ್ಠವಾದುದನ್ನೂ ನಿರೀಕ್ಷಿಸಲು ಸಾಧ್ಯ. ಏಕೆಂದರೆ ಅ
ಮನಸಿಜನ ಮಾಯೆಗೆ ಬಲಿಯುವವಳಾಗಿದ್ದರೆ ಕೌಶಿಕನ ಅಂತಃಪುರದಲ್ಲಿ ಯಾ
ರೀತಿಯ ಕೊರತೆಗಳೂ ಇರಲಿಲ್ಲ. ಅಲ್ಲಿಯೂ ಕೂಡ ಆಕೆ ತನ್ನ ಮನಗಳ ಮೇಲ
ಮನಸಿಜನ ಮಾಯಾಜಾಲವನ್ನು ಮೀರಿ ನಿಲ್ಲುವ ಅಂತರಂಗದ ಆವಿಷ್ಕಾರವನ
ಸಾಧಿಸಿತೋರಿರುತ್ತಾಳೆ. ತನಗೊದಗಿದ್ದ ಈ ಭವಪಾಷಗಳನ್ನು ದಾಟುವ, ಅ
ಅಂತರ್ವಾಣಿಯ ನಿಲುವು, ಪುರುಷಾರ್ಥದಿಂದ ಹೊರತಾದ ಪಾರಮಾರ್ಥಿ
ಚಿಂತನೆಯ ಯಶಸ್ಸಿನ ಮೆಟ್ಟಿಲುಗಳಾಗಿದೆ. ಬದುಕಿನ ಅತ್ಯಂತ ಕ್ಲಿಷ್ಟ ಸಂದ
ಗಳಲ್ಲೂ ತನ್ನ ವೈರಾಗ್ಯ ಸಂಪನ್ನತೆಯನ್ನು ಮೆರೆದು, ಭಕ್ತಿಯನ್ನು ಇಮ್ಮಡಿಗೊ
ಕೊಂಡ ಅಕ್ಕನ ಜೀವನ ನಿಜವಾಗಿಯೂ ಅನುಭಾವದ ಮಹಾನ್ ಚೇತನ.

'ಹರನೇಗಂಡನಾಗಬೇಕೆಂದು ಅನಂತಕಾಲ ತಪಸಿದ್ದೆ ನೋಡಾ' ಎಂ
ಹೇಳುವ ಅಕ್ಕ ಹರನಿಗೇ ತನ್ನನ್ನು ನಿಜಸತಿಯನ್ನಾಗಿ ಸಾಕಾರ ಪಡಿಸಿಕೊಂಡಿದ್ದಾ
ಈ ವೇಳೆಗಾಗಲೆ ಅವಳು ದೇಹ ಭಾವವನ್ನು ಸಂಪೂರ್ಣವಾಗಿ ಅಳಿದು, ಮೋಹದಿಂ
ಮುಕ್ತಳಾಗಿ, ಪರಮನೊಳಗೆ ಅನುಸಂಧಾನಗೊಳ್ಳುವ ಔನ್ನತ್ಯದ ಶಿಖರವನ
ಏರತೊಡಗಿದ್ದಾಳೆ. ಈಗ ಅವಳಿಗೆ ಕಾಯ, ಮಾಯೆಗಳ ಹಂಗಿಲ್ಲ. ಲೋಕದ ಸಹ
ವ್ಯಾಪಾರದ ಆಚೆಗಿನ ವ್ಯವಹಾರದಲ್ಲೋ ಅವಳ ಸಂವಾದವೇನಿದ್ದರೂ. ಇಂತಾದವರ
ಅರಮನೆಯೇನು ? ಅಡವಿಯೇನು ?

"ಮಂಗಳವೇ ಮಜ್ಜನವೆನೆಗೆ,
ವಿಭೂತಿಯೇ ಒಳಗುಂದದರಿಸಿನವೆನಗೆ,
ದಿಗಂಬರವೇ ದಿವ್ಯಾಂಬರವೆನಗೆ,
ಶಿವಪಾದರೇಣುವೇ ಅನುಲೇಪನವೆನಗೆ,
ರುದ್ರಾಕ್ಷಿಯೇ ವೈದೊಡಿಗೆಯೆನಗೆ,
ಶರಣರ ಶ್ರೀ ಪಾದಗಳೇ ತೊಂಡಲವೆನಗೆ,
ಚೆನ್ನಮಲ್ಲಿಕಾರ್ಜುನನೇ ಗಂಡನೆನಗೆ,
ಆನು ಚೆನ್ನಮಲ್ಲಿಕಾರ್ಜುನಂಗೆ ಮದುವಳಿಗೆ;
ಎನಗೆ ಬೇರೆ ಶೃಂಗಾರವೇಕೆ ಹೇಳವ್ವ" ॥೧೧॥

ಈ ಪರಿಯ ಶಿವಸಾಕ್ಷಾತ್ಕಾರದ ಅನುಭಾವ ಸಾಧಕಿ ಅಕ್ಕನೊಂದಿಗೆ, ಹೇಗೆತಾನೆ ಆ ಕೌಶಿಕ ಅನುರಕ್ತಿ ಪಡೆದಾನು. ಅವಳ ಸಮಗ್ರ ವ್ಯಕ್ತಿತ್ವ ಸಂಪೂರ್ಣ ಶಿವಾನುಭೂತಿಯನ್ನು ಪಡೆದಾಗಿದೆ. ಪ್ರಮುಖವಾಗಿ ಇಲ್ಲಿ ಅಕ್ಕನ ಭಕ್ತಿಮಾರ್ಗ ಹಾಗೂ ಜ್ಞಾನಮಾರ್ಗ ಇವೆರಡೂ ಅವಳನ್ನು ಅನುಭಾವಿಯ ಹಂತಕ್ಕೆ ಕೊಂಡೊಯ್ದಿವೆ. ಇಷ್ಟಾದರೂ ಕೂಡ ಅಕ್ಕನಿಗೆ ಕೌಶಿಕನ ಅರಮನೆಯಲ್ಲಿ ಇರುವವರೆಗೂ ಅವನಿಂದ ಉಪಟಳ ತಪ್ಪಿರಲಿಲ್ಲ. ವೈರಾಗ್ಯನಿಧಿ ಅಕ್ಕನ ಎಲ್ಲ ವ್ರತಗಳಿಗೂ ಆತ ಭಂಗ ತಾರದಿರಲಿಲ್ಲ. ಬಿರುಗಾಳಿಗೊಡ್ಡಿದ ಸೊಡರಿನಂತೆ ಅಕ್ಕ ಕಡುಕಷ್ಟಗಳ ನಡುವೆಯೂ ಪರಮಾರ್ಥವನ್ನು ಸಾಧಿಸಿದ್ದಳು.

"ಕೈಸಿರಿಯ ದಂಡವ ಕೊಳಬಹುದಲ್ಲದೆ, ಮೈಸಿರಿಯ ದಂಡವ ಕೊಳಲುಂಟೆ ?
ಉಟ್ಟಂತ ಉಡುಗೆ ತೊಡುಗೆಯನೆಲ್ಲ ಸೆಳೆದುಕೊಳಬಹುದಲ್ಲದೆ
ಮುಚ್ಚಿ ಮುಸುಕಿರ್ದ ನಿರ್ವಾಣದ ಸೆಳೆದುಕೊಳಬಹುದೆ ?
ಚೆನ್ನಮಲ್ಲಿಕಾರ್ಜುನ ದೇವರ ಬೆಳಗನುಟ್ಟು ಲಜ್ಜೆಗೆಟ್ಟವಳಿಗೆ
ಉಡುಗೆ ತೊಡುಗೆಯ ಹಂಗೇಕೋ ಮರುಳೆ" ||೧೨||

ಆಚಾರ ಸಂಪನ್ನೆ ಅಕ್ಕನ ಬಾಯಿಂದ ಇಂತಹ ಮಾತುಗಳು ಬರಬೇಕಾದರೆ ಆಕೆ ಎಂತಹ ಪರಿಸ್ಥಿತಿಯ ಒತ್ತಡವನ್ನು ಅನುಭವಿಸಿರಬೇಕು. ಮಾನಸಿಕವಾಗಿ ನೊಂದು ಬೆಂದ ಅವಳ ಅಂತರಾತ್ಮ ಅನುಭಾವಪಾಕದ ಕೊಡವಾಗಿ ಪರಿವರ್ತನೆಗೊಂಡಂತಿದೆ. ಇಂತಹ ಅನುಭಾವದ ಅಮೃತತತ್ವ, ದೂಷಣೆಗಿಳಿಯದೆ, ಪರಿವರ್ತನೆಗೆ ತಕ್ಕ ಉಪದೇಶಾಮೃತವಾಗಿ ಪರಿಣಮಿಸಿದೆ. ಚಿಪ್ಪಿನ ಒಳಗಣ ಕಾಂತಿಮಣಿಯಂತೆ ಅವಳ ಒಂದೊಂದು ಆಣಿಮುತ್ತುಗಳೂ ಅನುಭಾವದ ನೆಲೆಯಿಂದ ಹೊರಹೊಮ್ಮಿದ ಸ್ಪರ್ಷಮಣಿಯಂತಿವೆ.

ಮೂರನೆಯ ಘಟ್ಟದಲ್ಲಿ ಅಕ್ಕ ಲೋಕದ ಮೊನಚು ನುಡಿಗಳಿಗೆ ಮನನೊಂದು ತಾನು ಅನುಭವಿಸಿದ ಮಾನಸಿಕ ಯಾತನೆಗಳಿಗನುಗುಣವಾಗಿ ಸ್ಪಂಧಿಸಿದ ಭಾವನಾತ್ಮಕ ನೆಲೆಗಳನ್ನು ಪರಿಶೀಲಿಸಬಹುದು. ತಾರುಣ್ಯದ ಉತ್ತುಂಗದಲ್ಲಿದ್ದ ಆಕೆ, ಕೌಶಿಕನ ಸೆರೆಯನ್ನು ಹರಿದು ಕೌಟುಂಬಿಕ ನೆಲೆಯನ್ನೇ ಮೀರಿ ನಿಲ್ಲುತ್ತಾಳೆ. ಅರಮನೆಯಿಂದ ಹೊರಬಂದರೇನು? ಲೌಕಿಕರ ವಕ್ರದೃಷ್ಟಿ ಇವಳನ್ನು ಬೆಂಬಿಡದೆ ಕಾಡತೊಡಗಿತ್ತು. ಬೋಗುಣಿಯಿಂದ ಬೆಂಕಿಗೆ ಹಾರಿದಂತಹ ಕರುಣಾಜನಕ ಸ್ಥಿತಿ ಅವಳದಾಗಿತ್ತು. ಇಂತಹ ಜರ್ಜರಿತವಾದ ಸಂದರ್ಭಗಳಲ್ಲೂ ಆಕೆಯ ಸ್ಪಂಧನೆ ಅನುಭಾವದ ನೆಲೆಯನ್ನು ಮೀರುವುದಿಲ್ಲ. ಸರ್ವಸ್ವವನ್ನೂ ತೊರೆದು ಸರ್ವಾಂತರ್ಯಾಮಿಯಲ್ಲಿ ತನ್ಮಯಳಾಗ ಬಯಸುವ ಆಕೆಯ ಭಾವುಕ ವರ್ತನೆ ಕೋಟಿಗೊಬ್ಬ ಶರಣನಿಗೆ ಮಾತ್ರ ಸಾಧ್ಯವಾಗುವಂಥದ್ದು.

"ಆರೂ ಇಲ್ಲದವಳೆಂದು
ಅಳಿಗೊಳಲು ಬೇಡ ಕಂಡಯ್ಯ,
ಏನ ಮಾಡಿದಡೆಯೂ ನಾನು ಅಂಜುವಳಲ್ಲ,
ತರಗೆಲೆಯ ಮೆಲಿದು ನಾನಿಹೆನು,
ಸುರಗಿಯ ಮೇಲೊರಗಿ ನಾನಿಹೆನು,
ಚೆನ್ನಮಲ್ಲಿಕಾರ್ಜುನಯ್ಯಾ ಕರ (ಕೆಡನೋಡಿದಡೆ)
ಒಡಲನೂ ಪ್ರಾಣವನೂ ನಿನಗೊಪ್ಪಿಸಿ ಶುದ್ಧಳಹೆನು" ||೧೩||

ಅಕ್ಕಮಹಾದೇವಿ ಜಟಿಲ ಪರಿಸ್ಥಿತಿಗೆ ಮಣಿದು ಮನ ಸೋತವಳಲ್ಲ. ಕಗ್ಗಲ್ಲಿರಲಿ, ಪ್ರಪಾತವಿರಲಿ ಬಿಡದೆ ಹರಿಯುವ ಪ್ರವಾಹದಂತೆ ಅವಳ ಮನಸ್ಸು. ಎಲ್ಲಿಂದೆಲ್ಲಿಗೇ ಹರಿದರು ತನ್ನ ಸ್ವಂತಿಕೆಯನ್ನು ಬಿಡದಬಲ, ಹಾಗೂ ಪರಿವರ್ತನಾಶೀಲ ಅನುಸಂಧಾನವೆ ಅವಳ ವಿಶಿಷ್ಟವ್ಯಕ್ತಿತ್ವದ ಲಕ್ಷಣ. ಈ ಜೀವನವೆಂಬ ಭವ ಸಾಗರವನ್ನು ದಾಟುವಾಗ ಒದಗಿಬರುವ ಎಡರು ತೊಡರುಗಳನ್ನೆಲ್ಲಾ ನಂಬಿದವನ ಕೊರಳಿಗೆ ಸಮರ್ಪಿಸುವ ಸಮರತಿ (ಅರ್ಪಣಾ) ಭಾವ ಅಕ್ಕನದು.

ಅರಮನೆಯಿಂದ ಹೊರಬಂದ ಅಕ್ಕನನ್ನು ಅಂದಿನ ಸಮಾಜ, ಗಂಡನನ್ನು ಬಿಟ್ಟವಳು ಸಂಸಾರವನ್ನು ತೊರೆದವಳು ಎಂದು ಜರಿದಿರುವುದು ಸಹಜವೆ. ಇಂತಹ ವೇದನೆಗೆ ಒಳಗಾದ ಅವಳ ನಿವೇದನೆಯು ಹರಿದು ಬರುವುದು. ಹತಾಶದ ನೆಲೆಯಿಂದಲ್ಲ ಅರಿವಿನ ಮಾರ್ಗದಿಂದ, ಅನುಭಾವ ಸನ್ಮಾರ್ಗದಿಂದ. ಅವಳ ನಿಜವಾದ ವೈವಾಹಿಕ ಕಲ್ಪನೆಯಂತು, ಬೆರಗುಮೂಡಿಸುವಂತಹದು.

"ಗುರುವೇ ತೆತ್ತಿಗನಾದ. ಲಿಂಗವೇ ಮದುವಣಿಗನಾದ,
ಆನು ಮದುವಳಿಗೆಯಾದೆನು, ವಸುಧೆಯ ಭಕ್ತರೆಲ್ಲರು ನಿಬ್ಬಣಿಗರಾದರು,
ಕೊಟ್ಟರು ಸಾದೃಶ್ಯವಪ್ಪ ಗಂಡನ ನೋಡಿ
ಇದು ಕಾರಣ ಚನ್ನಮಲ್ಲಿಕಾರ್ಜುನನೇ ಗಂಡನೆನಗೆ." ||೧೪||

ಇಲ್ಲಿ ವೀರಶೈವ (ಶರಣ) ಪರಿಕಲ್ಪನೆಗಳಿಗೆ ಅನುಗುಣವಾಗಿ ಅನುಭಾವವನ್ನು ಸತಿಪತಿ ಭಾವದ ಮೂಲಕ ಅಭಿವ್ಯಕ್ತಿಗೊಳಿಸಲಾಗಿದೆ. ತನ್ನ ಅನುಭಾವವನ್ನೇ ಶ್ರೇಷ್ಠ ಕಾವ್ಯವಾಗಿಸುವ ಸಾಮರ್ಥ್ಯವುಳ್ಳ ಅಕ್ಕನ ವೈರಾಗ್ಯ ಸಂಪನ್ನತೆ ಅವಿಸ್ಮರಣೀಯವಾದುದು. ಇಂತಹ ಸಮರತಿ ಭಾವದ ಅಕ್ಕನ ಮದುವೆ ಚೆನ್ನಮಲ್ಲಿಕಾರ್ಜುನನೊಡನೆ ನಡೆದ ರೀತಿಯಂತು ಅತ್ಯಂತ ಅದ್ಭುತವಾದ ಕಲ್ಪನೆ.

"ಜಲದ ಮಂಟಪದ ಮೇಲೆ, ಉರಿಯಚಪ್ಪರವನಿಕ್ಕಿ,
ಆಲಿಕಲ್ಲ ಹಸೆಯ ಹಾಸಿ, ಕಾಲಿಲ್ಲದ ಹೆಂಡತಿಗೆ
ತಲೆಯಿಲ್ಲದ ಗಂಡ ಬಂದು ಮದುವೆಯಾದನು,
ಎಂದೆಂದಿಗೂ ಬಿಡದ ಬಾಳುವೆಗೆ ಕೊಟ್ಟರೆನ್ನ
ನ್ನಮಲ್ಲಿಕಾರ್ಜುನನೆಂಬ ಗಂಡಂಗೆನ್ನ ಮದುವೆಯ ಮಾಡಿದರು 15 (ವಚನದಅರ್ಥ)

ಅಕ್ಕನ ಈ ಮಾತುಗಳು ಬೆಡಗಿನಿಂದ ಕೂಡಿದ್ದರೂ, ಈ ವೇಳೆಗಾಗಲೆ ಆಕೆ ...ತಹ ಅನುಭಾವದ ಶೃಂಗವನ್ನು ತಲುಪಿದ್ದಳೆಂಬುದಕ್ಕೆ ಉತ್ತಮ ನಿದರ್ಶನವಾಗಿದೆ. ...ಸ್ತುತ ಸಂದರ್ಭ ಅವಳ ಅತ್ಯುನ್ನತ ಭಕ್ತಿಯ ಅನುಭಾವದ ಅನುಸಂಧಾನವೆನ್ನ ...ಬಹುದು.

'ಲೋಕದಲ್ಲಿ ಹುಟ್ಟಿದ ಬಳಿಕ ಸ್ತುತಿ ನಿಂದೆಗಳಿಗೆ ಅಂಜದೆ ಸಮಾಧಾನಿಯಾಗಿರ ...ಕು' ಎಂದು ಹೇಳುವ ಅಕ್ಕ, ಲೋಕದ ಅಲ್ಪಮತಿಗಳ ಪರಿಹಾಸ್ಯಕ್ಕೆ ಬೆಲೆಕೊಡು ...ಳಲ್ಲ. ಅದಕ್ಕಾಗಿ ತನ್ನ ಗಟ್ಟಿ ಮನಸ್ಸಿನ ದಿಟ್ಟ ಉತ್ತರ ಸಿದ್ಧವಾಗಿಯೇ ಇರುತ್ತದೆ.

"ಗಟ್ಟಿತುಪ್ಪ ತಿಳಿದುಪ್ಪಕ್ಕೆ ಭೇದವುಂಟೇ ಅಯ್ಯಾ ?
ದೀಪಕ್ಕೆ ದೀಪ್ತಿಗೆ ಭೇದವುಂಟೇ ಅಯ್ಯಾ ?
ಎನ್ನ ಅಂಗವನು ಶ್ರೀ ಗುರು ಮಂತ್ರವ ಮಾಡಿ ತೋರಿದನಾಗಿ
ಸಾವಯ ನಿರವಯಕ್ಕೆ ಭಿನ್ನವಿಲ್ಲವಯ್ಯಾ
ಚೆನ್ನಮಲ್ಲಿಕಾರ್ಜುನನ ಬೆರಸಿ ಮತಿಗೆಟ್ಟವಳ
ಏತಕ್ಕೆ ನುಡಿಸುವಿರಯ್ಯಾ"? ೧೬.

...ಳ ಸದೃಢ ವ್ಯಕ್ತಿತ್ವ ಶ್ರೀ ಗುರುವಿನಿಂದ ಮಂತ್ರಮಯವಾದುದು; ಭಿನ್ನಾಭಿನ್ನ-...ಂದ ಮುಕ್ತವಾದುದು; ನರಹರನಾದಾಗಿನ ಅದ್ವೈತದ ಸಿದ್ಧಿಯನ್ನು ಪಡೆದದ್ದು. ...ಗೆ ಮಹಾದೇವಿಯಕ್ಕ ಹಂತ ಹಂತವಾಗಿ ಸಾಧನೆಯ ಪಥದಲ್ಲಿ ಅನುಭಾವದ ...ಗವನ್ನು ಏರತೊಡಗುತ್ತಾಳೆ.

ಕೊನೆಯ ಘಟ್ಟದ ವೇಳೆಗೆ ಆಕೆ ಲೋಕದ ಎಲ್ಲ ಜಂಜಡಗಳಿಂದ ದೂರವಾಗಿ ...ಲ್ಯಾಣಕ್ಕೆ ಬಂದು ಬಸವಾದಿ ಶರಣರ ಶರಧಿಯಲ್ಲಿ ಸಮ್ಮಿಳಿತಳಾಗಿ ಸಂತಸ ಪಡುತ್ತಾಳೆ-... ಅನುಭಾವಿಗಳ ಸಂಗವಮಾಡಿ ತಾನು ಹಿಂದೆ ಅನುಭವಿಸಿದ್ದ ಎಲ್ಲಾ ಭವಗಳನ್ನು ...ಮರೆಯುತ್ತಾಳೆ.

---

"ಚಂಚಲವಾದ ಮನಸ್ಸೆಂಬ ಮಂಟಪದ ಮೇಲೆ ಜ್ಞಾನನ ಚಪ್ಪರವನಿಕ್ಕಿದರು ...ರುವಿನ ಕರುಣೆಯ ದೃಷ್ಟಿಯೇ ಹಸೆಮಣೆಯಾಯಿತು. ಲೌಕಿಕದ ಆಚರಣೆಯಿಲ್ಲದ

ಶರಣ ಸತಿಗೆ ಭವಬಂಧನಗಳನ್ನು ಮೆಟ್ಟಿನಿಂತ ಲಿಂಗಪತಿಯಾದನು. ಇದು ಎಂದೆಂದ
ಬಿಡದ ಶಾಶ್ವತವಾದ ದಾಂಪತ್ಯ. ಅಂತಹ ದಾಂಪತ್ಯ ನನಗೆ ಘಟಿಸಿತು, ಎನ್ನುತ್ತ
ಅಕ್ಕ"

---

(ಸಿದ್ಧಗಂಗಾ ಶ್ರೀ ಪುಟ-8

ತನ್ನ ಜೀವಿತದಲ್ಲೇ ಅತ್ಯುನ್ನತ ಮಟ್ಟದ ಮಹಾನುಭಾವಿಯ ಹಂತವನ್ನು
ನೆರವಾದ ಶರಣರನ್ನು ಮನಸಾರೆ ಸ್ಮರಿಸುತ್ತಾಳೆ.

ಅಯ್ಯಾ ನಿಮ್ಮ ಅನುಭಾವಿಗಳ ಸಂಗದಿಂದ
ಎನ್ನ ತನು ಶುದ್ಧವಾಯಿತ್ತು,
ಅಯ್ಯಾ ನಿಮ್ಮ ಅನುಭಾವಿಗಳ ಸಂಗದಿಂದ
ಎನ್ನ ಮನ ಶುದ್ಧವಾಯಿತ್ತು,
ಅಯ್ಯಾ ನಿಮ್ಮ ಅನುಭಾವಿಗಳ ನೊರೆದೊರೆದು
ಆಗು ಮಾಡಿದ ಕಾರಣ
ಚೆನ್ನಮಲ್ಲಿಕಾರ್ಜುನಾ ನಿಮಗಾನು ತೊಡುಗೆಯಾದೆನು." ॥ ೧೭ ॥

ಈ ಮಾತುಗಳು ಅವಳಲ್ಲಿನ ಮುಕ್ತ ಮನಸ್ಸಿನ ಸಮಷ್ಟಿ ಪ್ರಜೆಗೆ ಹಿಡಿದ ಕನ್ನಡಿಯಂತ
ಜೊತೆಗೆ ಅಕೆಯು ತನ್ನ ಅಂತಿಮ ಘಟ್ಟದಲ್ಲಿ ಕಲ್ಯಾಣದ ಬಸವಾದಿ ಪ್ರಮಥರೊಂ
ಬೆರೆತಾಗ, ಹಾಗೂ ಜೀವನದಲ್ಲಿ ತನಗಾದ ನೋವು ನಲಿವುಗಳಿಗೆ ಅವರು ನೀ
ಸಾಂತ್ವನದ ಕುರುಹಾಗಿ ಮೇಲಿನ ಮಾತುಗಳು ಹೊರ ಹೊಮ್ಮಿವೆ.

ಲೋಕದ ನಡಾವಳಿಕೆಗೆ ತದ್ವಿರುದ್ಧವಾದ ಅಕ್ಕನ ನಡೆಯು ನೋಡುಗರಿಗೆಲ
ವಿಪರ್ಯಾಸವಾಗಿ ತೋರುವುದು ಸಹಜವೆ. ಅವಳ ಅಲ್ಪಕಾಲದ ಅಪಾರ ಅನು
ಗಳ ಅನುಭಾವದ ಸಾರ ಮುಂದಿನ ವಚನದಲ್ಲಿ ಮಡುಗಟ್ಟಿ ನಿಂತಿದೆ.

"ಮೂಲವಾದಾರದ ಬೇರ ಮೆಟ್ಟಿ ಭೂಮಂಡಲವ ನೇರಿದೆ;
ಆಚಾರದ ಬೇರ ಹಿಡಿದು ಐಕ್ಯದ ತುದಿಗೇರಿದೆ;
ವೈರಾಗ್ಯದ ಸೋಪಾನದಿಂದ ಶ್ರೀ ಗಿರಿಯ ನೇರಿದೆ;
ಕೈವಿಡಿದು ಕರೆದುಕೊಳ್ಳಾ, ಚೆನ್ನಮಲ್ಲಿಕಾರ್ಜುನ" ॥೧೮॥

ಇದು ಅವರ ಒಟ್ಟಾರೆ ಬದುಕಿನ ವಿಭಿನ್ನಸ್ತರಗಳ ಅವಸ್ಥಾಂತರವೂ ಹೌದು. ಜೊ
ಹಂತ ಹಂತವಾಗಿ ತಾನು ಏರಿದ ಪರಮ ಸಿದ್ಧಿಯ ಪ್ರತೀಕವೂ ಹೌದು. ಆರಂಭ
ದಿನಗಳಿಂದ ಇಲ್ಲಿಯವರೆಗೆ ಪರಮಾನುಸಂಧಾನ ಕೈ ಗೂಡಿದಾಗ ಆಕೆಯಲ್ಲಿ ಉಂಟಾ
ಭಾವನೆಗಳು ಸಮರಸದ ಸಂಕೇತವಾಗಿವೆ.

"ತನು ನಿಮ್ಮ ರೂಪಾದ ಬಳಿಕ ನಾನಾರಿಗೆ ಮಾಡುವೆ ?
ಮನ ನಿಮ್ಮ ರೂಪಾದ ಬಳಿಕ ನಾನಾರ ನೆನೆವೆ ?
ಪ್ರಾಣ ನಿಮ್ಮ ರೂಪಾದ ಬಳಿಕ ನಾನಾರ ನಾರಾಧಿಸುವೆ ?
ಅರಿವು ನಿಮ್ಮಲ್ಲಿ ಸ್ವಯವಾದ ಬಳಿಕ ನಾನಾರನರಿವೆ ?
ಚೆನ್ನಮಲ್ಲಿಕಾರ್ಜುನಾ ನಿಮ್ಮಲ್ಲಿ ನೀವಾಗಿ ನಿಮ್ಮಿಂದ ನಿಮ್ಮ ಮರೆದನಯ್ಯಾ" ||೧೯||

ಅಕ್ಕನ ಅನುಭಾವದ ಪೂರ್ಣಾವ್ಯಸ್ಥೆಯ ದ್ಯೋತಕವಿದು, ಕಳೆದ ಮೂರು ಘಟ್ಟಗಳಲ್ಲಿ ಏರುಮುಖವಾಗಿದ್ದು ಪರಮಾರ್ಥಸಾಧನೆಯು, ಭಕ್ತಿಯ ವಿಭಿನ್ನ ಹಂತಗಳನ್ನು ದಾಟಿ, ಈಗ ಅನುಸಂಧಾನದ (ಸಾಕಾರ) ಸಿದ್ಧಿಯ ಪೂರ್ಣಾವಸ್ಥೆಯನ್ನು ಪಡೆವಂತಾಗಿದೆ. ನಾನು ನೀನೆಂಬ ಅಭೇದಗಳನ್ನು ಮೆಟ್ಟಿ ಸರ್ವೇಶ್ವರನಲ್ಲಿ ಸಾಕಾರಗೊಂಡ (ನಿರಾಕಾರದ) ಶರಣ ತತ್ವದ ಶೂನ್ಯ ಸಂಪಾದನೆಯನ್ನು ಗಳಿಸಿದ ಸಾರ್ಥಕ್ಯವಿಲ್ಲಿದೆ.

ಅನುಭಾವದ ಸಾಮ್ರಾಜ್ಯದ ಅಗ್ರಗಣ್ಯಳೆನಿಸುವ ಅಕ್ಕನ ಬುದುಕಿನ ಅಂತ್ಯದ, (ಪರ್ಯವಸಾನದ) ಅನುಭಾವದ ಮಾತುಗಳು ಹೃದಯವನ್ನು ಮಿಡಿಯುವಂತಿವೆ.

"ಕದಳಿಯೆಂಬುದು ತನು; ಕದಳಿಯೆಂಬುದು ಮನ;
ಕದಳಿಯೆಂಬುದು ಸರ್ವ ವಿಷಯಂಗಳು;
ಕದಳಿಯೆಂಬುದು ಭವ ಘೋರಾರಣ್ಯ-
ಕದಳಿಯೆಂಬುದು ಗೆದ್ದು ತವೆ ಬದುಕಿ ಬಂದು.
ಕದಳಿಯ ಬನದಲ್ಲಿ ಭವಹರನ ಕಂಡೆನು !
ಭವಗೆಟ್ಟು ಬಂದ ಮಗಳೆಂದು ಕರುಣದಿಂ ತೆಗೆದು ಚೆಂದು ಬಿಗಿಯಪ್ಪಿದರೆ
ಚೆನ್ನಮಲ್ಲಿಕಾರ್ಜುನನ ಹೃದಯ ಕಮಲದಲ್ಲಿ ಅಡಗಿದೆನು." ||೨೦||

ಇಂತಹ ಅಮೃತಮಯವಾಣಿಗೆ ಅನ್ಯವಿವರಣೆಯ ಅಗತ್ಯವುಂಟೆ? ಅದೇನೇ ಇರಲಿ ಅಕ್ಕನ ಬದುಕು ವಿವಿಧ ಸ್ತರಗಳಲ್ಲಿ ಹರಿಯುವ ಹೊನಲಿನಂತಿದ್ದು ಭವಸಾಗರಗಳನ್ನೆಲ್ಲಾ ದಾಟಿ ತನ್ನ ಅಂತಃ ಸತ್ವಗಳಿಗೆ ಎಲ್ಲಿಯೂ ಚ್ಯುತಿ ಬಾರದಿರುವಂತೆ, ಅಮೃತಮಯವಾದ ಅನುಭಾವ ಶರಧಿಯಲ್ಲಿ ಕೂಡಿಕೊಂಡ ಪರಿ ಜಗತ್ತಿಗೇ ಆದರ್ಶವಾಗಿದೆ. ಒಟ್ಟಾರೆ ಅವಳ ಇಡೀ ಬದುಕೆ ಒಂದು ಬಗೆಯ ಅಂತರಂಗದ ಸಂಘರ್ಷ, ಅನುಭಾವದ ಆವಿಷ್ಕಾರ. ಹೀಗಾಗಿ ಅವಳ ಬಹುತೇಕ ವಚನ ಸಂಪತ್ತು ಬರಿಯ ಸಾಹಿತ್ಯಕ ಕೊಡುಗೆ ಮಾತ್ರವಲ್ಲ; ಶ್ರೇಷ್ಠ ಜೀವನದ ಸಾಧನೆಯ ಅನುಭಾವ ಸಂಪತ್ತೂ ಹೌದು.

---

**ಬಿ. ಸಿ. ವೀರಪ್ಪ, ನಂ 2299, 3 ಬಿ ಮುಖ್ಯ ರಸ್ತೆ, 2ನೇ ಹಂತ, ವಿಜಯನಗರ, ಬೆಂಗಳೂರು–40**

# ವಿಜ್ಞಾನಿಗಳ ದೃಷ್ಟಿಯಲ್ಲಿ ದೇವರು – 3

ಪ್ಯಾಸ್ಕಲ್ ಮಹಾಶಯನು "A man without faith in God is worse than an an invalid, because he is without the vital living essence of life" ಎಂದಿದ್ದಾರೆ. ದೈವದಲ್ಲಿ ನಂಬಿಕೆಯನ್ನಿಡದ ಮನುಷ್ಯ ಕೆಲಸಕ್ಕೆ ಬಾರದವನಿಗಿಂತ ಕಡೆ. ಏಕೆಂದರೆ ಅವನಲ್ಲಿ ಜೀವನಕ್ಕೆ ಅತ್ಯಗತ್ಯವಾದ ಸತ್ವವೇ ಇಲ್ಲ ಎಂದು ಅವನ ಅಭಿಮತ. ಆದ್ದರಿಂದ ದೈವದ ಅಸ್ತಿತ್ವದಲ್ಲಿ ನಂಬಿಕೆ ಮಾನವನ ಜೀವಿತದಲ್ಲಿ ಅತಿ ಮುಖ್ಯವಾದ ಅಂಶ.

ಪ್ರಖ್ಯಾತ ಜೀವಶಾಸ್ತ್ರಜ್ಞರಾದ Prof. H. Schaffner ರವರು 25 ವರ್ಷಗಳ ಕಾಲ ಸತತವಾಗಿ ನಾನಾ ಜಾತಿಯ ಸಸ್ಯವರ್ಗದ ಬಗ್ಗೆ ಸಂಶೋಧನೆ ನಡೆಸಿ ಅವುಗಳಲ್ಲಿ ಕಂಡುಬಂದ ಕ್ರಮಬದ್ಧತೆಯನ್ನು ನಿಯಮಿತ ಬೆಳವಣಿಗೆಯನ್ನು ಗಮನಿಸಿ ಈ ರೀತಿ ಹೇಳಿದ್ದಾರೆ. "There are just two modes of thought in respect to the universe–the theistic and the anarchistic. A mat must either believe that his things he apprehends are from God, or that every thing is anarchic. If the latter, then our political anarchists have the true views of life and existence. Therefore the theistic conception is the only reasonable bais of belief for a normal, intelligent mind. The definite progress of development in plants, the order and the principle, the wonderful system of plant relationship, lead but to one inevitable conclusion-Cause, effect, principle, law, God. There is 'oneness' is the Universe, not a chaos but a cosmos" Which according to prof. Sehaffner, calls for man's faith is the creator, without this faith, Man would Greate only chaos all around". ಇವರ ಅಭಿಪ್ರಾಯ ವೇನೆಂದರೆ, ಈ ಬ್ರಹ್ಮಾಂಡದ ಸೃಷ್ಟಿ ಹಾಗೂ ರಚನೆ ಬಗ್ಗೆ ಎರಡು ರೀತಿಯಲ್ಲಿ ಯೋಚಿಸಬಹುದು. ಒಂದು ಆಸ್ತಿಕವಾದ, ಮತ್ತೊಂದು ಅನಾಯಕವಾದ. ಆಸ್ತಿಕವಾದವೆಂದರೆ, ಮಾನವನಿಗೆ ತನ್ನ ಇಂದ್ರಿಯಗಳ ಮೂಲಕ ತಿಳಿಯಬಲ್ಲ ಎಲ್ಲವೂ ದೈವ ಸೃಷ್ಟಿಯಿಂದ ಆಗಿವೆ ಎಂಬುದು, ಅನಾಯಕವಾದವೆಂದರೆ ಯಾರ

ಅಂಕೆಯೂ ಇಲ್ಲದೆ ಅನಿಯಮಿತವಾಗಿ ನಡೆಯುತ್ತಿದೆ ಎಂಬ:ದು. ಎರಡನೆಯ ಅನಾಯಕವಾದವನ್ನು ನಾವು ಒಪ್ಪಿಕೊಂಡಲ್ಲಿ, ನಾಯಕನಿಲ್ಲದ, ನಿಯಮಗಳಿಲ್ಲದ ರಾಜ್ಯ ಹೇಗೆ ನಡೆಯಬಲ್ಲದು ಎಂಬುದು ನಮಗೆ ತಿಳಿಯುತ್ತದೆ. ಆದ್ದರಿಂದ, ಈ ಜಗತ್ತಿನ ಎಲ್ಲಾ ಕಡೆ ಕಾಣಬರುವ ನಿಯಮಗಳನ್ನು, ಕ್ರಮಬದ್ಧತೆಯನ್ನು ನೋಡಿದಾಗ ಆಸ್ತಿಕವಾದವನ್ನು ಒಪ್ಪಲೇಬೇಕಾಗುತ್ತದೆ. ಸಸ್ಯಗಳಲ್ಲಿನ ಸ್ಪಷ್ಟವಾದ ನಿಯಮಗಳಿಗನುಸಾರವಾಗಿ ನಡೆಯುತ್ತಿರುವ ಬೆಳವಣಿಗೆಯನ್ನೂ, ಹಾಗೂ ಅವುಗಳಲ್ಲಿ ಕಂಡುಬರುವ ಸಕ್ರಮ ತತ್ವ ಹಾಗೂ ಅತ್ಯಾಶ್ಚರ್ಯಕರವಾದ ಸಂಬಂಧ, ಇವುಗಳನ್ನೆಲ್ಲಾ ಪರಿಶೀಲಿಸಿದಾಗ ಇವೆಲ್ಲವುಗಳಿಗೂ ಕಾರಣವಾದ ಒಂದು ಮಹಾಶಕ್ತಿ ಇದೆ, ಪರಿಣಾಮವಿದೆ, ತತ್ವವಿದೆ, ನಿಯಮಗಳಿವೆ-ಇದೇ ಆ ದೈವಶಕ್ತಿ. ವಿಶ್ವದಲ್ಲಿ ಎಲ್ಲೆಲ್ಲಿನೋಡಿದರೂ ಏಕತೆ ಕಂಡುಬರುತ್ತಿದೆ. ದ್ವಂದ್ವವಿಲ್ಲವೆಂದು ತಿಳಿಯುತ್ತದೆ. ಇವೆಲ್ಲವನ್ನು ಅನುಭವದಿಂದ ಕಂಡುಕೊಂಡ ವಿಜ್ಞಾನಿ Schaffner ರವರು ಎಲ್ಲಾ ಮಾನವರೂ ಆ ಮಹಾಶಕ್ತಿ (ದೈವದ)ಯ ಅಸ್ತಿತ್ವವನ್ನು ನಂಬಬೇಕು. ಹಾಗೆ ನಂಬದಿದ್ದಲ್ಲಿ ಮಾನವನು ಎಲ್ಲೆಲ್ಲೂ ಗಲಿಬಿಲಿಗೊಳಪಡುತ್ತಾನೆ ಎಂದಿದ್ದಾರೆ.

Dr. Carl Jung ಎಂಬ ಪ್ರಸಿದ್ಧ ಮನಶ್ಶಾಸ್ತ್ರಜ್ಞನು ಇಂದಿನ ಸಮಾಜದ ಪರಿಸ್ಥಿತಿಯ ಬಗ್ಗೆ ವಿ ರಣೆ ನೀಡುತ್ತಾ "Our age has blindness without parallel" ನಮ್ಮ ಈ ಯುಗದಲ್ಲಿ ಸರಿಸಾಟಿಯಿಲ್ಲದ ಅಜ್ಞಾನ ತುಂಬಿತುಳುಕಾಡುತ್ತಿದೆ–ಎಂದಿದ್ದಾರೆ. ಮುಂದುವರೆದು ಹೇಳುತ್ತಾ "Whenever the spirit of God is excludcd from human considerations, an unconscious substitute takes place–these substitutes being "NEW GODS" suct as political party; Government and the like" ಮಾನವನ ಆಲೋಚನೆಯಿಂದ ದೈವದ ಅಸ್ತಿತ್ವದ ಭಾವನೆಯನ್ನು ತೆಗೆದು ಹಾಕಿದರೆ ಇದಕ್ಕೆ ಬದಲಾಗಿ ಅವನಲ್ಲಿ ರಾಜಕೀಯ ಸರ್ಕಾರ ಹಾಗೂ ಇಂತಹ ಹೊಸ ದೇವರುಗಳು ಅವನ ತಲೆಯಲ್ಲಿ ಬರುತ್ತವೆ. ಎಂದಿದ್ದಾರೆ. ಮತ್ತೆ ಹೇಳುತ್ತಾ "That the denial of religion and god is a device of the modern man to escape the moral and ethical code or moral commandments" ಎಂದು ಮಾರ್ಮಿಕವಾಗಿ ನುಡಿದಿದ್ದಾರೆ. ಆಧುನಿಕ ಮನುಷ್ಯನು ನೀತಿ ನಿಯಮಗಳನ್ನು ಮತ್ತು ಧರ್ಮದ ಆಣತಿಗಳನ್ನು ತಪ್ಪಿಸಿಕೊಳ್ಳುವುದಕೋಸ್ಕರ ದೈವದ ಅಸ್ತಿತ್ವವನ್ನು ಅಲ್ಲಗಳೆಯುತ್ತಿದ್ದಾನೆ ಎಂಬುದು ಸಾರಾಂಶ.

ಭೌತಶಾಸ್ತ್ರಜ್ಞರಾದ Lincoln Barnett ರವರು ವಿಜ್ಞಾನಿಗಳು ದೇವ
ಎಂಬ ಹೆಸರನ್ನು ಉಪಯೋಗಿಸಲು ಹೆದರುತ್ತಿದ್ದಾರೆ ಅಥವಾ ಹಿಂಜರಿಯುತ್ತಿದ್ದಾರೆ
ಬಗ್ಗೆ ಅವರ ಅಭಿಪ್ರಾಯವನ್ನು ತಿಳಿಸುತ್ತಾ ಈ ರೀತಿ ಅಭಿಪ್ರಾಯಪಟ್ಟಿದ್ದಾ
"Most scientists, when referring to mysteries, forc
origins, rationality and ha mony of the univers
tend to avoid using the word God, Yet, Einste
had no such inhibitions. He savs "My religic
consists of a humble admiration of the illimitab
superior spirit who reveals himself if the sligh
details we are able to pereeive with our frail an
feeble minds. That deeply emotional conviction c
the presence of a superior reasonlig power, whic
is revealed in the incomprehensible universe form
my idea God." ಅನೇಕ ವಿಜ್ಞಾನಿಗಳು ಈ ವಿಶ್ವದ ಅತ್ಯಾಶ್ಚರ್ಯಕರವಾ
ಸಂಗತಿಗಳನ್ನು ರಹಸ್ಯಗಳನ್ನು ವಿವಿಧಶಕ್ತಿಗಳನ್ನು ಹಾಗೂ ವಿಶ್ವದಲ್ಲಿ ಕಂಡುಬರು
ಕ್ರಮಬದ್ಧತೆಯನ್ನು ಮತ್ತು ಏಕತೆಯನ್ನು ತಮ್ಮ ಸಂಶೋಧನೆಗಳಿಂದ ಕಂಡ
ಹಿಡಿದಿದ್ದರೂ ಸಹ ಇವಕ್ಕೆಲ್ಲಾ ದೇವರ ಶಕ್ತಿಯೇ ಕಾರಣವೆಂದು ಧೈರ್ಯವಾ
ಹೇಳಲು ಹಿಂಜರಿಯುತ್ತಾರೆ. ಆದರೆ ಸುಪ್ರಸಿದ್ಧ ವಿಜ್ಞಾನಿ ಡಾ|| ಐನ್‌ಸ್ಟೀನ್‌ರವರ
ತಾವು ಅನುಭವಿಸಿದ ದೈವತ್ವದ ಅರಿವನ್ನು ಯಾವ ಸಂಕೋಚವೂ ಇಲ್ಲದೆ ಈ
ರೀತಿ ಹೇಳಿದ್ದಾರೆ. ಈ ಬ್ರಹ್ಮಾಂಡದಲ್ಲಿ ನಮ್ಮ ಅತಿ ದುರ್ಬಲವಾದ ಮನಸ್ಸಿ
ವಿಶ್ವದ ಪ್ರತಿಯೊಂದರಲ್ಲಿಯೂ ಕಾಣಬರುವ ಆ ಮಹಾ ಶಕ್ತಿಯನ್ನು ನಮ್ರವಾ
ಒಪ್ಪಿಕೊಳ್ಳುವುದೇ ನನ್ನ ಧರ್ಮ. ಅರಿಯಲಸಾಧ್ಯವಾದ ಈ ಮಹಾನ್ ವಿಶ್ವದ
ಕಾಣಬರುವ ಅತ್ಯಂತ ಮಹತ್ತರವಾದ ಕಾರಣಶಕ್ತಿ (Superior reasonig
power)ಯ ಇರುವಿಕೆಯೇ ನನ್ನ ಭಾಗದ ದೇವರು–ಎಂದು ಹೇಳಿರುವುದ
ದೈವದ ಅಸ್ತಿತ್ವವನ್ನು ಕೇವಲ ಮೂಢನಂಬಿಕೆಯಿಂದ ಒಪ್ಪದೆ ವೈಜ್ಞಾನಿಕವಾಗಿ
ಹಾಗೂ ತಮ್ಮ ಅವಿಷ್ಕಾರಗಳಿಂದ ಕಂಡುಕೊಂಡ ಅನುಭವದಿಂದ ಹೇಳಿದ್ದಾರೆಂಬು
ದನ್ನು ನಾವೆಲ್ಲರೂ ಒಪ್ಪಲೇಬೇಕಾಗಿದೆ.

ಸ್ವಾಮಿ ವಿವೇಕಾನಂದರು ವೇದ ಉಪನಿಷತ್‌ಗಳನ್ನು ಆಧರಿಸಿ ಹಾಗೂ ತಾವು ಮಾಡಿದ ಹತ್ತಾರು ವರ್ಷಗಳ ತಪಸ್ಸಿನ ಸಾಧನೆಯ ಫಲದಿಂದ ನಮ್ಮ ಹಿಂದಿನವರು ಹೇಳಿರುವ ಈ ಆರ್ಯೋಕ್ತಿಯನ್ನು ಒತ್ತಿ ಹೇಳಿದ್ದಾರೆ. "Yo vai Sarvatmake devo nishkalo gagomopamaha He is indeed, thə only" Divine being omnipresent enrolled in everyone, in divisible like the sky" ಆಕಾಶದಂತೆ ವಿಭಜಿಸಲಾಗದೆ ಆ ದೈವ ಶಕ್ತಿಯು ವಿಶ್ವದ ಸರ್ವರಲ್ಲಿಯೂ ಸರ್ವವಸ್ತುವಿನಲ್ಲಿಯೂ ಸರ್ವಾಂತರ್ಯಾಮಿಯಾಗಿ ಬ್ರಹ್ಮತತ್ವವಾಗಿ ಅಡಗಿದೆ.

ವೇದಗಳು ಸಾರುವಂತೆ "ಸರ್ವಂ ಖಲು ಇದಂ ಬ್ರಹ್ಮ All the living beings and objeets we see around us are only brahman" ವಿಶ್ವದ ಎಲ್ಲಾ ಸಜೀವಿ ಹಾಗೂ ನಿರ್ಜೀವಿ ವಸ್ತುಗಳಲ್ಲಿಯೂ ಈ ದೈವಾಂಶವೇ ಇದೆ. ಇವೆಲ್ಲವೂ ಬ್ರಹ್ಮ ಸ್ವರೂಪಗಳೇ.

ಎಲ್ಲರಲ್ಲಿಯೂ ಬ್ರಹ್ಮನಿದ್ದಾನೆಂದು ಅಂತಹ ಮಹಾನ್ ಶಕ್ತಿಯ ಇರುವಿಕೆಯನ್ನು ವಿಜ್ಞಾನಿಗಳು ಅನುಭಾದಿಂದ ಕಂಡುಕೊಂಡ ಅಂಶವು, ನಮ್ಮ ಪ್ರಾಚೀನ ಋಷಿಗಳು, ಸಂತರು ಹಾಗೂ ದಾರ್ಶನಿಕರು ತಮ್ಮ ಅನುಭವದಿಂದ ಆಧ್ಯಾತ್ಮಿಕ ರೀತಿಯಲ್ಲಿ ಕಂಡುಕೊಂಡ ಅನುಭವಕ್ಕೆ ತಾಳ್ಮೆಯಾಗುವುದರಿಂದ ಆ ಮಹಾನ್ ಶಕ್ತಿಯ ಇರುವಿಕೆಯನ್ನು ಅಂದರೆ ದೈವದ ಆಸ್ತಿತ್ವವನ್ನು ನಾವು ವೈಜ್ಞಾನಿಕವಾಗಿಯೂ ಒಪ್ಪಲೇಬೆಕಲ್ಲವೆ? ಅಂದಮೇಲೆ ಪ್ರತಿಯೊಬ್ಬ ಮಾನವನಲ್ಲಿಯೂ ಒಂದೇ ದೈವಾಂಶವು ಇದೆ, ವಿಶ್ವದ ಪ್ರತಿಯೊಬ್ಬನೂ ಸಹೋದರನೇ. ಆದ್ದರಿಂದ ನಾವೆಲ್ಲ ವಿಶ್ವ ಭಾತೃತ್ವ ಬೆಳೆಸಿಕೊಂಡು ನಿಜವಾದ ಮಾನವರಂತೆ ಬಾಳಬೇಕಾದುದು ಎಲ್ಲರ ಕರ್ತವ್ಯವಾಗಿದೆ. ಅಲ್ಲದೆ ಅರವಿಂದ ಘೋಷರು ಹಾಗೂ ಸ್ವಾಮಿವಿವೇಕಾನಂದರು ಹೇಳುವಂತೆ ಮಾನವ ಸೇವೆಯೇ ಮಾಧವಸೇವೆ ಎಂಬುದನ್ನು ಅರಿತು ಸಮಾಜದಲ್ಲಿ ದುರ್ಬಲರನ್ನು ಅಶಕ್ತರನ್ನು, ರೋಗಿಗಳನ್ನು ಸಹಾಯ ಬೇಕಾದವರನ್ನು ಸೇವಿಸುವುದೇ ನಿಜವಾದ ದೇವರ ಪೂಜೆಯಲ್ಲವೆ.

ದೈವದ ಅಸ್ತಿತ್ವದಲ್ಲಿ ನಮಗೆ ನಂಬಿಕೆ ಬಂದಾಗ ನಾವು ತಪ್ಪು ನಡವಳಿಕೆ ನಡೆಯುವುದು ಕಡಿಮೆಯಾಗಿ ನಮ್ಮಲ್ಲಿ ನೀತಿ ನಿಯಮಗಳು ಮೂಡುತ್ತವೆ. ನೀತಿವಂತರು ಹೆಚ್ಚಾದಾಗ ಉತ್ತಮ ಸಮಾಜವು ನಿರ್ಮಾಣವಾಗುತ್ತದೆ. ಇದೇ ಸರ್ವರಿಗೂ ಸರ್ವಕಾಲಕ್ಕೂ ಬೇಕಾದ ಆದರ್ಶವಾದ ಅಂಶ. ಆದ್ದರಿಂದ ದೈವದ ನಂಬಿಕೆಯೇ ಉತ್ತಮ ಸಮಾಜ ನಿರ್ಮಾಣದ ಮೂಲ.

---

ಚ್. ಎಸ್. ನರಸಿಂಹಜೀಯರ್, 14 ನೇ ಕ್ರಾಸ್, ತೋಟದರಸ್ತೆ, ತುಮಕೂರು-2
ಏಪ್ರಿಲ್-95

# 'ನಾನು' ಹೋದರೆ ಹೋದೇನು'

ಆಕಾಶದಲ್ಲಿ ಮೋಡಗಳು ತುಂಬಿರುವಾಗ ಸೂರ್ಯ, ಚಂದ್ರರು ಕಾಣಿಸುವುದಿಲ್ಲ. ಅದರಂತೆಯೇ ಮಾನವನಲ್ಲಿ ಪರಮಾತ್ಮನು ನೆಲೆಸಿದ್ದರೂ ಅಹಂಕಾರವು ಆ ಮನಸ್ಸನ್ನಿಡೀ ಆವರಿಸಿದ್ದರೆ ದೈವತ್ವದ ಪ್ರಭೆಯು ಮಂಕಾಗಿರುತ್ತದೆ. ಆಧುನಿ ಮಾನವನು ಆಕಾಶದಲ್ಲಿ ಹಾರಬಲ್ಲ, ತಾರೆಗಳ ನಡುವಣ ಕೋಟ್ಯಂತರ ಮೈಲುಗ ದೂರವನ್ನು ಅಳೆಯಬಲ್ಲ. ಹೀಗಿದ್ದರೂ ಹೃದಯ-ಹೃದಯಗಳನ್ನು ದೂರವಿಡಬಲ್ಲ ಅಹಂಕಾರದ ಅಗಾಧತೆ ಎಷ್ಟೆಂಬುದನ್ನು ತಿಳಿದುಕೊಳ್ಳಲಾರ. ಹಿಂದೊಮ್ಮೆ ವಾದಿ ರಾಜರು ಸ್ವರ್ಗಕ್ಕೆ ಯಾರು ಹೋಗುತ್ತೀರಿ ಎಂದು ಪ್ರಶ್ನಿಸಿದಾಗ ಕುರಬರಾದ ಕನ ದಾಸರು, 'ನಾನು' ಹೋದರೆ ಹೋದೇನು' ಎಂದರಂತೆ. ಕರ್ಮಠರೆನಿಸಿಕೊಂಡ ಅನೇಕರು ಆ ಮಾತಿಗೆ ಸಿಟ್ಟಿಗೆದ್ದು, 'ನಮ್ಮಂತಹ ಕರ್ಮನಿಷ್ಠರು, ದೈವಭಕ್ತರಿರುವಾಗ ಈ ಕುರುಬ ಸ್ವರ್ಗಕ್ಕೆ ಹೋಗುವುದೆ ?' ಎಂದರು.

ವಾದಿರಾಜರು ಮುಗುಳ್ನಕ್ಕು, "ನೀವು ದೈವಭಕ್ತರೆಂದು ಹೇಳಿಕೊಳ್ಳುವಂತಹ 'ಅಹಂ' ಭಾವನೆಯೇ ನಾನು ಎಂಬರ್ಥ. ಈ ಭಾವನೆ ತೊಲಗಿದರೆ ಮಾತ್ರವೇ ಸ್ವರ್ಗ ದಲ್ಲಿ ಪ್ರವೇಶ ಸಿಗುತ್ತದೆಂದು ಕನಕದಾಸರ ಮಾತಿನ ಅರ್ಥವೇ ವಿನಾ ತಾನೇ ಅಲ್ಲಿಗೆ ಹೋಗುತ್ತೇನೆಂಬ ಭಾವನೆ ಅವರದಲ್ಲ" ಎಂದು ವಿವರಿಸಿದರಂತೆ.

ಮನುಷ್ಯ ಯಾವುದನ್ನು ಸೇರಬೇಕೋ ಆ ಗುರಿಯನ್ನು ತಿಳಿಯುವಲ್ಲಿವರೆಗೆ ಯಾವುದನ್ನು ತಿಳಿಯಬೇಕೋ ಅದನ್ನು ಅರಿಯುವ ತನಕ, ಯಾವುದನ್ನು ಮರೆಯ ಬೇಕೋ ಅದನ್ನು ಮರೆಯುವತನಕ ಬದುಕಿನಲ್ಲಿ ಸಂತೋಷವನ್ನೆಂದಿಗೂ ಪಡೆಯಲಾ ಈ ಸಂತೋಷದ ಪ್ರಾಪ್ತಿಗೆ ಅಹಂಕಾರವು ತೊಡರುಗಾಲಿಕ್ಕುತ್ತದೆ. ವಿದ್ಯೆ ಸಂಪತ್ತು ಅಧಿಕಾರಗಳಿದ್ದರೂ ಆತ್ಮಜ್ಞಾನವು ಸಿಗದೆ ಶಾಂತಿ ಲಭಿಸದು. ದುಃಖ, ಸುಖಗಳ ನಮ್ಮ ಮನೆಗೆ ಬಂದು ಹೋಗುವ ಇಬ್ಬಗೆಯ ಅತಿಥಿಗಳಾದ್ದರಿಂದ ಅವೆರಡನ್ನು ಮನೋವಿಕಾರದ ವಿಭಿನ್ನ ರೂಪಗಳೆಂದೂ ತಿಳಿಯಬಹುದು. ಈ ತಿಳಿವು ಮೂಡಿದಾಗ ಅಹಂಭಾವವು ಅಲ್ಲಿಗೆ ಹೋಗಲು ಆಸ್ಪದವಿರುವುದಿಲ್ಲ.

ಅಶಾಂತಸ್ಯ ಕುತಃ ಸುಖಂ ? ಅಶಾಂತಿಯಿರುವವನಿಗೆ ಸುಖವು ಸಿಗದು ಇನ್ನೊಬ್ಬರು ನಮ್ಮನ್ನು ಟೀಕಿಸಿದಾಗ ನಮ್ಮ ಮನಸ್ಸೇಕೆ ಕದಡಬೇಕು ? ನಮ್ಮಲ್ಲಿ ಟೀಕೆಗೆ ಕಾರಣವಾದ ಸಂಗತಿಯಿದ್ದರೆ ತಿದ್ದಿಕೊಳ್ಳೋಣ. ಇನ್ನೊಬ್ಬರು ಅಹಂಕಾರ, ಅಜ್ಞಾನ, ಮತ್ಸರಗಳಿಂದ ನಮ್ಮನ್ನು ಟೀಕಿಸಿದ್ದರೆ ನಾವು ಅದನ್ನು ಸ್ವೀಕರಿಸಬೇಕಾಗಿಲ್ಲ.

ಮನೆಯೊಂದರ ಮುಂದೆ ಭಗವಾನ್ ಬುದ್ಧನು ಭಿಕ್ಷೆಗೆ ನಿಂತಾಗ ಮನೆಯೊಡೆಯನು ನಾನಾ ರೀತಿಯಿಂದ ನಿಂದಿಸಿದ. ಕಡೆಗೆ ಮುಗುಳ್ನಗುತ್ತ ಬುದ್ಧನು, 'ಅಯ್ಯಾ, ನಿನಗೆ ಇಷ್ಟವಿಲ್ಲದ ವಸ್ತುವೊಂದನ್ನು ಒಬ್ಬರು ನೀಡಿದರು. ಅಂತಾದರೆ ನೀನು ಅ ನ್ನು ಏನು ಮಾಡುತ್ತೀಯಾ'? ಕೇಳಿದ. "ನಿರ್ದಾಕ್ಷಿಣ್ಯವಾಗಿ ತಿರಸ್ಕರಿಸುತ್ತೇನೆ. ಆ ವಸ್ತುವನ್ನು ಅವನ ಕಡೆಗೇ ಹಿಂತಿರುಗಿ ಕಳುಹಿಸುತ್ತೇನೆ" ಎಂದು ಹೇಳಿದ ಮನೆಯೊಡೆಯ.

"ನಾನೂ ಅಷ್ಟೆಯೇ. ನನಗೆ ಬೇಡವಾದ ನಿನ್ನ ಬೈಗಳನ್ನೆಲ್ಲ ತಿರಸ್ಕರಿಸಿದ್ದೇನೆ. ಅದನ್ನೆಲ್ಲ ನೀನೇ ಮರಳಿ ಪಡೆಗುಕೋ" ಎಂದು ಬುದ್ಧ ಭಗವಾನನೂ ಹೇಳಿದ.

ನಿರರ್ಥಕವಾಗಿ ನಮ್ಮನ್ನು ಇನ್ನೊಬ್ಬರು ಟೀಕಿಸಿದರೆ ಬುದ್ಧನ ಈ ನೀತಿಯನ್ನು ಅನುಸರಿಸಬಹುದು. ಅಹಂಕಾರದ ವರ್ತನೆಗೆ ನಾವೂ ಪ್ರತಿ ಅಹಂಕಾರದಿಂದ ನಡೆದು ಕೊಂಡರೆ ಮಾನವೀಯತೆ ಮಗ್ಗಲು ಬದಲಾಯಿಸುತ್ತದೆ. ಮಹಾಭಾರತದಲ್ಲಿ ಧರ್ಮರಾಜನ ತಮ್ಮಂದಿರು ರಾಗ, ದ್ವೇಷಗಳ ಪ್ರತೀಕವಾಗಿದ್ದರೂ ಅವರನ್ನೂ ಆತ ಹಿಡಿತದಲ್ಲಿರಿಸಿಕೊಂಡಿದ್ದರಿಂದ ಧರ್ಮಕ್ಕೇ ಗೆಲುವೆಂಬುದು ವಿದಿತವಾಯಿತು. ಸಶರೀರ ನಾಗಿ ಸ್ವರ್ಗಾರೋಹಣ ಮಾಡುವ ಅವಕಾಶ ಧರ್ಮರಾಜನಿಗೆ ಮಾತ್ರ ಲಭಿಸಿ-ದಾಗಲೂ ಅವನ ಬಳಿಗೆ ಅಹಂಕಾರ ಸುಳಿಯಲಿಲ್ಲ. ಸಂಗಾತಿಯಾಗಿ ಬಂದ ನಾಯಿ ಯನ್ನು ಆತ ನಾಕಕ್ಕೆ ಕರೆದೊಯ್ಯಲು ಬಲಾತ್ಕರಿಸಿದ. ನಿರಹಂಕಾರಿಯ ಮನ-ಸ್ಸೆಂದಿಗೂ ದೈವಕಟಾಕ್ಷವನ್ನು ತನ್ನ ಗಳಿಕೆಯೊಂದು ಹಿಗ್ಗಿಕೊಳ್ಳದೆ ಸಮಾನ ಭಾವದಿಂದ ಹಂಚಿಕೊಳ್ಳಲೆತ್ನಿಸುತ್ತದೆ.

ನಿತ್ಯ ಜೀವನದಲ್ಲಿ ಧರ್ಮಾನುಸರಣೆ ಮಾಡುವ ವ್ಯಕ್ತಿಯನ್ನು ರಾಗದ್ವೇಷಗಳು ಕಾಡುವುದಿಲ್ಲ. ನಮ್ಮಲ್ಲಿ ಉತ್ಪನ್ನಗೊಳ್ಳುವ ಶಕ್ತಿಯನ್ನು ತಾಳ್ಮೆಯಿಂದ ಏಕೀಕೃತ ಗೊಳಿಸಿ, ಸತ್ಯಪರವಾಗಿ ಸಾಗುವಂತೆ ಮಾಡುವುದನ್ನು ಮೀರಿಸಿದ ಇನ್ನೊಂದು ಧರ್ಮವಿಲ್ಲ. ಈ ಚೈತನ್ಯವು ಅಹಂಕಾರ ರಹಿತವಾದಾಗ ತ್ರಿಗುಣಸ್ವರೂಪಿಯಾದ ಧರ್ಮವಾಗುತ್ತದೆ. ಸೃಷ್ಟಿ ಚೈತನ್ಯಕ್ಕೆ ಈಶ್ವರತ್ವ ನೀಡಿದರೆ ಅದೇ ಧರ್ಮವೆನಿಸುವುದು ಅನಿತ್ಯವಾದ ದೇಹ ಧರ್ಮವು ಬದಲಾವಣೆ ಹೊಂದುತ್ತಲೇ ಇರುವುದರಿಂದ ಅದು ಪರಮ ಧರ್ಮವಾಗುತ್ತದೆ. ವರ್ಣ ಧರ್ಮ, ಆಶ್ರಮ, ಧರ್ಮಗಳು ಬದುಕಿಗೆ ಮಾತ್ರ ಆಧಾರವಾಗುತ್ತದೆ. ಮಾನಸಿಕವಾಗಿ ದೈಹಿಕವಾಗಿ ಆತ್ಮನೊಂದಿಗೆ ಬೆಳೆಸುವ ಸಂಪರ್ಕವೇ ಆತ್ಮಧರ್ಮವೆನಿಸಿದೆ.

ಧರ್ಮವನ್ನು ಅನುಸರಿಸದೆ ಅರ್ಥ, ಕಾಮಗಳನ್ನು ಒಳಗೆಳೆದುಕೊಂಡರೆ ಬದುಕಿನಲ್ಲಿ ಅಶಾಂತಿಯು ತಲೆದೋರುತ್ತದೆ. ಧರ್ಮಗಾಮಿಯಾಗಿ ಅರ್ಥ, ಕಾಮ ಗಳನ್ನು ಆರ್ಜಿಸಿದರೆ ಮೋಹವು ಕ್ಷಯಗೊಳ್ಳುತ್ತದೆ. ಈ ಅವಸ್ಥೆಗೆ ಮೋಕ್ಷ ಎನ್ನುತ್ತಾರೆ.

ಬೇಡಿದುದನ್ನು ಕೊಡಬಲ್ಲ ಒಂದೇ ಶಕ್ತಿಯಿದೆ. ಅದನ್ನು ಭಗವಂತ ಎನ್ನಬಹುದು
"ಮನ ಏವ ಮನುಷ್ಯಾಣಾಂ" ಎಂಬಂತೆ ಆತನಲ್ಲಿ ಯೋಚಿಸುವಾಗ ಮನಸ್ಸಿನಲ್ಲಿ ಯ
ಭಾವನೆ ಉದ್ಭೂತವಾಗಿರುತ್ತದೋ ಅದೇ ರೀತಿ ಆತ ಫಲ ಕೊಡುತ್ತಾನೆ. ಭಗವಂತ
ಪ್ರೇಮಸ್ವರೂಪಿ. ಆತನನ್ನು ಪ್ರೇಮದಿಂದ ಆರಾಧಿಸಬೇಕಲ್ಲದೆ ಅಹಂಕಾರ, ಲೋಭ
ಮದಮತ್ಸರಾದಿ ಭಾವನೆಗಳಿಂದ ಅರ್ಚಿಸಿದರೆ ಸತ್ಫಲ ಸಿಗುವುದಾದರೂ ಹೇಗೆ? ಯಾವ
ಗ್ರಹಬಾಧೆಯೂ ಮನುಷ್ಯನನ್ನು ತಟ್ಟುವುದಿಲ್ಲ. ಆತನನ್ನು ಕಾಡುವುದು ಇಂದ್ರಿಯ
ಗಳಲ್ಲಿ ಅಡಗಿದ ರಾಗದ್ವೇಷಗಳು. ಈ ಪ್ರಪಂಚದಲ್ಲಿ ಸುಖೀ ಬದುಕನ್ನು ಅನುಭವಿಸಲು
ಧರ್ಮ, ಪ್ರೇಮ, ಸತ್ಯ, ಕರುಣೆ, ತಾಳ್ಮೆಗಳೆಂಬ ಐದು ಸೋಪಾನಗಳಿವೆ." ಅದನ್ನೇರಿ
ಮನುಷ್ಯ ತನ್ನಲ್ಲಿರುವಮೃಗೀಯ ಭಾವನೆಯನ್ನು ಗೆದ್ದುಕೊಂಡ ಹಾಗೆ. ಈ ಗೆಲುವನ್ನು
ಸಾಧಿಸಿದವನ ಬಳಿಗೆ ಅಹಂಕಾರವು ಬಾರದು. ಆಗ ಮನುಷ್ಯ ಎಂಬ ಹೆಸರಿಗೆ ಆತ
ಅರ್ಹನಾಗುತ್ತಾನೆ.

---

—ಪ. ರಾಮಕೃಷ್ಣಶಾಸ್ತ್ರಿ, ಶಿವಶಕ್ತಿನಿಲಯ, ಅಂಚೆ : ಮುಚ್ಚೂರು 574295 (ದ.ಕ

## ವಚನಗಳು

ಕಣ್ಣಿಲ್ಲದ ಕುರುಡರನು ನಂಬಬಹುದು
ಕಿವಿಯಿಲ್ಲದ ಕಿವುಡರನು ನಂಬಬಹುದು
ಜಿಹ್ವೆಯಿಲ್ಲದ ಮೂಕರನು ನಂಬಬಹುದು
ಕಣ್ಣಿದ್ದೂ ಕಾಣದ, ಕಿವಿಯಿದ್ದೂ ಕೇಳದ,
ಜಿಹ್ವೆಯಿದ್ದೂ ನುಡಿಯದ ಮೂರ್ಖರನು
ನಂಬಿದರೆ ಕೆಟ್ಟೆವಯ್ಯ ನಂದಿಕೇಶ್ವರ.

ಕಂಡಕಂಡವರ ತಪ್ಪನೆಲ್ಲ ಎಣಿಸಿ, ಹಿಗ್ಗಿಸಿ
ದೂರುವ, ಸಾರುವ ಅಣ್ಣಗಳಿರಾ
ನಿಮ್ಮ ನಿಮ್ಮ ತಪ್ಪುಗಳ, ಕೆಡುಕುಗಳ, ಒಡಕುಗಳ
ಮೊದಲು ಅರಿತುಕೊಳ್ಳುವುದೆ ಲೇಸು
ಅವರಿವರ ಮೋರೆಗೆ ಮಸಿಹಚ್ಚುವ ಹುಚ್ಚಿನಿಂದ
ಕೈ ಮೈಗೆ ಕಪ್ಪು ಬಳಿದು ಕೊಳ್ಳಲೇಕೆ ನಂದಿಕೇಶ್ವರ?

ವಿ.ಬಿ. ಅರ್ತಿಕಜೆ, ಶ್ರೀನಿಲಯ, ಶಿವಪೇಟೆ, ಪುತ್ತೂರು ದ.ಕ-೫೭೪೨೦೧.

# ಕ್ಷೇತ್ರವಾರ್ತೆ

--ಹೆಚ್. ಬಿ. ಗಂಗಾಧರಯ್ಯ

## ಶ್ರೀ ಶ್ರೀ ಗಳವರ 88 ನೇ ಜನ್ಮದಿನೋತ್ಸವ-ಗುರುವಂದನ ಮಹೋತ್ಸವ-ಏಪ್ರಿಲ್-1995

2 ಏಪ್ರಿಲ್ 1995 ಭಾನುವಾರ ತ್ರಿವಿಧ ದಾಸೋಹ ಮೂರ್ತಿಗಳಾದ ಪರಮ ಪೂಜ್ಯ ಡಾ. ಶ್ರೀ. ಶ್ರೀ. ಶಿವಕುಮಾರ ಮಹಾಸ್ವಾಮಿಗಳವರ 88 ನೇ ಜನ್ಮದಿನ ಕಾರ್ಯಕ್ರಮವಾದ ಗುರುವಂದನೆಯನ್ನು ರಾಜ್ಯದ ಮುಖ್ಯ ಮಂತ್ರಿಗಳಾದ ಶ್ರೀ ಹೆಚ್. ಡಿ. ದೇವೇಗೌಡರು ಜ್ಯೋತಿ ಬೆಳಗಿಸುವುದರ ಮೂಲಕ ಉದ್ಘಾಟಿಸಿದರು.

ಇದಕ್ಕೆ ಮುನ್ನ ಪೂಜ್ಯ ಶ್ರೀ ಶ್ರೀಗಳವರನ್ನು ಹಳೇ ಮಠದಿಂದ 88 ಪೂರ್ಣಕುಂಭಗಳು ಮತ್ತು ಪಂಚ ಕಳಶದೊಂದಿಗೆ ಶಿಕ್ಷಕ ತರಬೇತಿ ಸಂಸ್ಥೆಯ ವಿದ್ಯಾರ್ಥಿನಿಯರು ಮತ್ತು ರಾಜ್ಯ ಪ್ರಶಸ್ತಿ ವಿಜೇತ ಹೆಚ್. ಎಸ್. ನೀಲಕಂಠಯ್ಯನವರ ಜಾನಪದ ವೀರಗಾಸೆ ನೃತ್ಯದೊಂದಿಗೆ ಸಹಸ್ರಾರು ಭಕ್ತಾದಿಗಳು ಮತ್ತು ವಿದ್ಯಾರ್ಥಿಗಳು ಭಕ್ತಿಭಾವದಿಂದ ವೇದಿಕೆಗೆ ಬರಮಾಡಿಕೊಂಡರು.

ಉದ್ಘಾಟನೆಯ ನಂತರ ಶ್ರೀ ಹೆಚ್. ಡಿ. ದೇವೇಗೌಡರು ಮಾತನಾಡಿ ಶ್ರೀ ಶ್ರೀಗಳು ಸಮಾಜಕ್ಕೆ ಮಾಡಿರುವ ಸೇವೆ ರಾಷ್ಟ್ರಕ್ಕೆ ಮಾದರಿಯಾಗಿದೆ. ವಿಶೇಷ ರೀತಿಯಲ್ಲಿ ಇಲ್ಲಿ ಎಲ್ಲಾ ಧರ್ಮಪೀಠಗಳಿಗೆ ಮೇಲುಗೈ ಕಾರ್ಯ ಸಾಧನೆಯಾಗಿದೆ. ಶ್ರೀ ಮಠದ ಮೇಲೆ ಎರಗಿ ಬಂದ ಕಷ್ಟ ಕಾರ್ಪಣ್ಯಗಳು ಶ್ರೀ ಶ್ರೀಗಳವರ ಆತ್ಮಶಕ್ತಿಯ ಬಲದಿಂದ ಮತ್ತು ದೇವರ ಕೃಪೆಯಿಂದ ನಿವಾರಣೆಯಾಗಿವೆ. ಈ ಬಗ್ಗೆ ಬುದ್ಧಿಜೀವಿಗಳು ಮತ್ತು ನಾಯಕರು ಪರಾಂಬರಿಸಬೇಕು. ಜನತೆ ನಮಗೆ ಅಧಿಕಾರ ಕೊಟ್ಟಿದೆ. ಬಡವರಿಗೆ ಹಳ್ಳಿಜನರಿಗೆ ಹಾಗೂ ಯಾವುದೇ ವರ್ಗಕ್ಕೆ ಅನ್ಯಾಯವಾಗದಂತೆ ಜವಾಬ್ದಾರಿಯಿಂದ ಕಾರ್ಯನಿರ್ವಹಿಸುತ್ತೇನೆ ಎಂದು ಶ್ರೀ ಶ್ರೀಗಳ ಸಾನಿಧ್ಯದಲ್ಲಿ ವಾಗ್ದಾನ ಮಾಡಿದರು. ಈ ಮಠಕ್ಕೆ ನಮ್ಮ ಸರ್ಕಾರ ಸಹಾಯ ಮಾಡಲು ಸಿದ್ಧ ಎಂದು ಹೇಳಿ ಮಠದ ಸೇವೆ ಮಾಡಲು ತಮಗೆ ಅವಕಾಶ ನೀಡಬೇಕೆಂದು ಸ್ವಾಮೀಜಿಗಳನ್ನು ಕೋರಿದರು, ಸಿದ್ಧಗಂಗಾ ಮಠ ಮತ್ತು ಸುತ್ತಮುತ್ತಲ ಗ್ರಾಮಗಳ ಅಭಿವೃದ್ಧಿಗಾಗಿ ವಿಶ್ವಬ್ಯಾಂಕ್ ಯೋಜನೆಯು 1 ಕೋಟಿ 90 ಲಕ್ಷ ರೂ.ಗಳನ್ನು ಮಂಜೂರು ಮಾಡುವುದಾಗಿ ಪ್ರಕಟಿಸಿದರು.

ಶ್ರೀ ಶ್ರೀ ಗಳವರ ಭಾವಚಿತ್ರವನ್ನು ಉಪಮುಖ್ಯಮಂತ್ರಿ ಜೆ. ಹೆಚ್. ಪಟೇಲ ಅನಾವರಣ ಮಾಡಿ ಕಾಯಕ ಮತ್ತು ದಾಸೋಹದಲ್ಲಿ ಸಿದ್ಧಗಂಗಾ ಮಠಕ್ಕೆ ಜೋ ಸಾಟಿ ಇಲ್ಲ ಎಂದು ಹೇಳಿದರು. ಶ್ರೀ ಶ್ರೀ ಗಳವರು ಬಸವತತ್ವ ರೂವಾರಿಗಳು ಬಸವೇಶ್ವರ ಸಾನಿಧ್ಯದಲ್ಲಿ ಬಂದಂತಹವರಿಗೆಲ್ಲಾ ವಿದ್ಯಾದಾನದ ಅಭಿಲಾಷೆ ಇದೆ ಬಸವ ಸಿದ್ಧಾಂತ ಕಾರ್ಲ್‌ಮಾರ್ಕ್ಸ್‌ಗಿಂತಲೂ ಹೆಚ್ಚು ಕ್ರಾಂತಿಕಾರಕ. ಅಂತಹ ಚಿಂತನೆಯನ್ನು ವಿಶ್ವದ ಎಲ್ಲೆಡೆ ಪ್ರಸಾರ ಮಾಡಲು ಸಾಧ್ಯವಾಗಿಲ್ಲ ಎಂದು ವಿಷಾದಿಸಿದರು.

ಭಕ್ತಿ ಸಮರ್ಪಣೆ ಸಲ್ಲಿಸಿದ ಶ್ರೀ ಮಠದ ಕಿರಿಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು ಮಾತನಾಡಿ ಶರಣರ ವಾಣಿಯೇ ಆತ್ಮಾರ್ಪಣ ಭಾವದಿಂದ ಭಕ್ತಿ ಸಮರ್ಪಿತವಾಗ ಬೇಕು. ನಮ್ಮ ಪೂಜ್ಯ ಗುರುಗಳು ಶ್ರೀ ಮಠದ ಉನ್ನತಿಗಾಗಿ ಸಮರ್ಪಿಸಿಕೊಂಡಿದ್ದಾರೆ ಅವರ ಮಾರ್ಗದರ್ಶನ ದೀರ್ಘಕಾಲ ನಮಗೆ ಲಭ್ಯವಾಗಬೇಕೆಂದು ಪರಶಿವನನ್ನು ಪ್ರಾರ್ಥಿಸಿದರು.

**ಭಕ್ತಾದಿಗದಿಗಳಿಂದ ಮಾಲಾರ್ಪಣೆ:** ಭಕ್ತರೇ ಶ್ರೀ ಮಠದ ಸಂಪತ್ತು. ಸುಮಾರು ಒಂದು ಗಂಟೆ ಕಾಲ ಸಹಸ್ರ ಸಹಸ್ರ ಭಕ್ತಾದಿಗಳು ಭಕ್ತಿ ಶ್ರದ್ಧೆಯಿಂದ ಸಾಲಾಗಿ ನಿಂತು ಶ್ರೀ ಶ್ರೀಗಳವರಿಗೆ ಮಾಲಾರ್ಪಣೆ ಮಾಡಿದರು.

ಲೋಕಸಭಾ ಉಪ ಸಭಾಪತಿ ಶ್ರೀ ಎಸ್ ಮಲ್ಲಿಕಾರ್ಜುನಯ್ಯ ಅವರು ಮಾತ ನಾಡಿ ಇದೊಂದು ಸುಂದರ ದೃಶ್ಯ, ಭಕ್ತರ ಪ್ರವಾಹ ಹರಿಯುತ್ತಿದೆ. ಸಹಸ್ರ ಸಹಸ್ರ ವಿದ್ಯಾರ್ಥಿಗಳಿಗೆ ಆಶ್ರಯ ನೀಡಿರುವ ಮಠ ರಾಷ್ಟ್ರದಲ್ಲಿ ಇದು ಒಂದೇ. ಇದು ಆಧ್ಯಾತ್ಮಿಕ ಕೇಂದ್ರವಾಗಿದೆ, ನಾಡಿನ ಜನತೆ ಇಲ್ಲಿನ ನಡೆಯುತ್ತಿರುವ ಮಾನವೀಯ ಕಾರ್ಯಗಳಿಗೆ ಉದಾರವಾಗಿ ನೆರವಾಗಬೇಕು ಎಂದು ಹೇಳಿದರು.

ಕೇಂದ್ರದ ರಾಜ್ಯಸಚಿವೆ ಶ್ರೀಮತಿ ಬಸವರಾಜೇಶ್ವರಿಯವರು ಮುಖ್ಯ ಅತಿಥಿ ಯಾಗಿ ಮಾತನಾಡಿ 5000 ವಿದ್ಯಾರ್ಥಿಗಳಿಗೆ ವಿದ್ಯಾದಾನ ಮಾಡುತ್ತಿರುವ ಶ್ರೀಮಠ ಪವಿತ್ರವಾಗಿದೆ, ಪ್ರತ್ಯಕ್ಷವಾಗಿ 12 ನೇ ಶತಮಾನದಲ್ಲಿ ಬಸವೇಶ್ವರರು ಸ್ಥಾಪಿಸಿದ ಅನು ಭವ ಮಂಟಪವನ್ನು ಇಲ್ಲಿ ಕಾಣುತ್ತೇವೆ. ಪೂಜ್ಯ ಶ್ರೀ ಶ್ರೀಗಳು ತ್ರಿಕಾಲ ಪೂಜೆ ಮಾಡಿ ಅಲ್ಪ ಆಹಾರ ಸೇವಿಸುತ್ತಾ ಸಮಾಜ ಮತ್ತು ರಾಷ್ಟ್ರದ ಪುರೋಭಿವೃದ್ಧಿಗೆ ಚಿಂತನೆ ಮಾಡುತ್ತಿದ್ದಾರೆ. ಶ್ರೀ ಶ್ರೀಗಳು 101 ವರ್ಷಗಳು ಬದುಕಿ ಮಾರ್ಗದರ್ಶನ ಮಾಡಲಿ ಎಂದು ಪ್ರಾರ್ಥಿಸಿದರು. ಸ್ತ್ರೀಯರಿಗೂ ಸ್ವಾತಂತ್ರ್ಯ, ಸಮಾನತೆ, ಅಧಿಕಾರ ಲಭ್ಯವಾಗ ಬೇಕು. ಅವರು ಹಕ್ಕು ಬಾಧ್ಯತೆಗಳನ್ನು ರಕ್ಷಿಸಿಕೊಳ್ಳಬೇಕೆಂದು ಪ್ರತಿಪಾದಿಸಿದರು.

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ಸಚಿವ ಮಾನ್ಯ ಶ್ರೀ ಎಂ.ಪಿ. ಪ್ರಕಾಶ್ ಮಾತನಾಡಿ ಇದು ಸ್ಮರಣೀಯ ಸಮಾರಂಭ ಶ್ರೀ ಶ್ರೀಗಳ ಅದ್ಭುತ ಕಾರ್ಯಗಳನ್ನು ಸ್ಮರಣೆ ಮಾಡುವ ದಿನ. ಈ ಮಠ ಸ್ತುತಿ ನಿಂದೆಗಳನ್ನು ಎದುರಿಸಿದೆ. ಸವಾಲನ್ನು ಸ್ವೀಕರಿಸಿದೆ. ಸಾಮಾಜಿಕ ಪರಿರ್ವತನೆ ಮಾಡಿದ್ದಾರೆ. ಸಾಮಾಜಿಕ ನ್ಯಾಯ ಇಲ್ಲಿ ದೊರಕಿದೆ. ಅಕ್ಷರ ಸಂಸ್ಕೃತಿಗೆ ಎಲ್ಲರನ್ನೂ ಒಳಪಡಿಸಿದ್ದಾರೆ. ದಾಸೋಹ ಕಾಯಕ ಇಲ್ಲಿ ಗರಿಷ್ಠ ಮಟ್ಟಕ್ಕೆ ಹೋಗಿದೆ. 5.000 ವಿದ್ಯಾರ್ಥಿಗಳಿಗೆ ದಾಸೋಹ ಒಂದು ಪವಾಡ ಸೃಜನ ಶೀಲತೆ ಇಲ್ಲಿ ಉಂಟು ಎಂದು ಹೇಳಿದರು. ತುಮಕೂರು ಶಾಸಕರಾದ ಶ್ರೀ ಎಸ್ ...ವಣ್ಣನವರು ಮಾತನಾಡಿ ಶ್ರೀ ಮಠಕ್ಕೆ ಕೊಡಬೇಕಾದುದನ್ನು ಹೇಳದೆ ನೀಡುವುದು ಒಳ್ಳೆಯದು ಎಂದು ಪ್ರತಿಪಾದಿಸಿದರು. ಮಾಜಿ ಸಚಿವ ಶ್ರೀ ಲಕ್ಷ್ಮೀನರಸಿಂಹಯ್ಯನವರು ಮಾತನಾಡಿ ಶ್ರೀ ಶ್ರೀಗಳು ಇನ್ನೂ ಹೆಚ್ಚಿನ ಶಕ್ತಿ ಪಡೆದು ಸಮಾಜ ಸೇವೆ ಮಾಡಲಿ ಎಂದು ಭಗವಂತನನ್ನ ಪ್ರಾರ್ಥಿಸಿದರು.

## ಗುರುವಂದನೆಯಲ್ಲಿ ಸನ್ಮಾನಿತರು

1 ಶ್ರೀ ಟಿ. ಅನಂತರಾಮ ಶ್ರೇಷ್ಠಿಯವರು
ದಾನಿಗಳು ವರ್ತಕರು, ತುಮಕೂರು.

2 ಶ್ರೀ ಪಾಟೀಲ್ ಪುಟ್ಟಪ್ಪನವರು
ಸಂಪಾದಕರು, ಪ್ರಪಂಚ ವಾರಪತ್ರಿಕೆ, ಹುಬ್ಬಳ್ಳಿ.

3 ಶ್ರೀ ಕೆ. ಹೆಚ್. ರಂಗನಾಥ್‌ರವರು
ಮಾಜಿ ಸಚಿವರು, ಬೆಂಗಳೂರು.

4 ಡಾ|| ಹಾ. ಮಾ. ನಾಯಕರವರು
ಮಾಜಿ ಕುಲಪತಿಗಳು, ಮೈಸೂರು.

ೀ ಶ್ರೀಗಳು ವಿವಿಧ ಕ್ಷೇತ್ರಗಳಲ್ಲಿ ವಿಶೇಷ ಸೇವೆ ಸಲ್ಲಿಸಿದ ಈ ಮೇಲಿನ ನಾಲ್ಕು ...ಂದಿ ಗಣ್ಯರಿಗೆ ಶಾಲು ಹೊದಿಸಿ ಗೌರವಿಸಿ ಶುಭ ಹಾರೈಸಿದರು.

ಸನ್ಮಾನಿತ ಶ್ರೀ ಪಾಟೀಲ್ ಪುಟ್ಟಪ್ಪನವರು ಮಾತನಾಡಿ ಶ್ರೀ ಸಿದ್ಧಗಂಗಾ ...ಠದಲ್ಲಿ ಪ್ರತಿದಿನ ಪವಾಡ ನಡೆಯುತ್ತಿದೆ. ?000 ವಿದ್ಯಾರ್ಥಿಗಳಿಗೆ ಪ್ರಸಾದ ...ತರಣೆ ಸುಲಭವಲ್ಲ, ಎಲ್ಲಾ ಮಠಾಧಿಪತಿಗಳು ಈ ವಿಧಾನ ಅನುಸರಿಸಿದರೆ ನಾಡು ...ವರ್ತನೆಯಾಗುತ್ತದೆ. ನಾನು ಧಾರವಾಡ ಮೃತ್ಯುಂಜಯ ಸ್ವಾಮಿಗಳ ಮಠದಲ್ಲಿ ...ಮನುಷ್ಯನಾಗಿದ್ದೇನೆ. ಶ್ರೀ ಸಿದ್ಧಗಂಗಾ ಶ್ರೀ ಶ್ರೀಗಳ ಬಗ್ಗೆ ಪೂಜ್ಯಭಾವನೆ ...ಂದಿದ್ದೇನೆ. ಮೃತ್ಯುಂಜಯ ಸ್ವಾಮಿಗಳಂತೆ ಇವರೂ ಕಾಡಿಬೇಡಿ ಮಠ ಕಟ್ಟಿದವರಲ್ಲ.

ಸಮಾಜದ ಸ್ವಯಂ ಪ್ರೇರಣೆ, ಅಭಿಮಾನದಿಂದ ಬೆಳೆದಿದೆ. ಸಮಾಜದಲ್ಲಿ ವಿಭ
ಶಕ್ತಿಗಳು ಜಾಸ್ತಿ, ಸಮಾಜ ಸಂಘಟನೆಗೆ ದ್ವೇಷ ಬಿಡಬೇಕು. ದ್ವೇಷಿಸುವುದು ಸುಲ
ಪ್ರೀತಿ ವಾತಾವರಣ ಸೃಷ್ಟಿಸುವುದು ಕಷ್ಟ. ತತ್ವಾನುಸರಣೆಯಿಂದ ಶ್ರೀ ಶ್ರೀಗ
ಅದ್ಭುತ ಪ್ರಗತಿ ಸಾಧಿಸಿ ವಿಶ್ವವಿಖ್ಯಾತರಾಗಿದ್ದಾರೆಂದು ಭಕ್ತಿ ತುಂಬಿ ನುಡಿದರು.

ಸನ್ಮಾನಿತ ಶ್ರೀ ಕೆ. ಹೆಚ್. ರಂಗನಾಥ್ ಮಾತನಾಡಿ ಸನ್ಮಾನಿತನಾಗಿ ನಾ
ಬಂದಿಲ್ಲ. ಆಶೀರ್ವಾದಕ್ಕಾಗಿ ಬಂದಿದ್ದೇನೆ. ಶ್ರೀ ಮಠದ ದಾಸೋಹದಲ್ಲಿ ಸಮಾ
ಇದೆ. ಶ್ರೀ ಶ್ರೀಗಳವರ ಸಾಧನೆಗಳಲ್ಲಿ ಅಪಾರವಾದ ಗೌರವವಿದೆ. ಸಮಾಜದ ಕೊನೆ
ಮೆಟ್ಟಿಲು ನಾನು ಹುಟ್ಟಿದ ವರ್ಗ, ಉತ್ತಮ ವಿಚಾರಗಳನ್ನು ನೋಡಬೇಕು ಕ
ಬೇಕೆಂಬ ಮಹತ್ವಾಕಾಂಕ್ಷೆ ಇದೆ. ಶ್ರೀ ಶ್ರೀ ಗಳು ದಣಿವರಿಯದೆ ಸದಾ ದುಡಿಯು
ದ್ದಾರೆ. ಇವರಿಂದ ಸುಸಂಸ್ಕೃತ ಸಮಾಜ ನಿರ್ಮಾಣವಾಗುತ್ತಿದೆ. ಶ್ರೀ ಶ್ರೀಗಳ ಆಯ
ಸಮಾಜದ, ರಾಷ್ಟ್ರದ ಪುರೋಭಿವೃದ್ಧಿಗಾಗಿ ಹೆಚ್ಚಾಗಲಿ ಎಂದು ಹಾರೈಸಿದರು.

ಸನ್ಮಾನಿತ ಹಾ.ಮಾ. ನಾಯಕರು ಮಾತನಾಡಿ ಶ್ರೀಮಠ ನನಗೆ ಹೊಸದ
ಇಲ್ಲಿಯ ಸಾಧನೆಗಳನ್ನು ನೋಡಿ, ಕೇಳಿ ಪ್ರಭಾವಿತನಾಗಿದ್ದೇನೆ. ಶ್ರೀ ಶ್ರೀ
ಕಾರ್ಯಕ್ಷೇತ್ರ ಮೇರು ಸದೃಶವಾಗಿದೆ. ಶ್ರೀ ಶ್ರೀಗಳು ನನ್ನ ಅಲ್ಪ ಸ್ವಲ್ಪ ಕೆ
ಗುರ್ತಿಸಿ ಸನ್ಮಾನ ಮಾಡಿದ್ದಾರೆ. ಮುಂದಿನ ಬದುಕಿನಲ್ಲಿ ಅವರ ಬೆಳಕಿನಲ್ಲೇ ನಡೆ
ಹೋಗುವೆ ಎಂಬ ಆಶ್ವಾಸನೆ ನೀಡಿದರು.

ಶ್ರೀ ಶ್ರೀಗಳ ವಜ್ರಮಹೋತ್ಸವ ಸಮಿತಿಯ ಅಧ್ಯಕ್ಷರಾದ ಡಾ|| ಎಂ.
ಮೋದಿಯವರು ಮಾತನಾಡಿ ಶ್ರೀ ಶ್ರೀಗಳು ದೇಶಕ್ಕೆ ದೊಡ್ಡಸೇವೆ ಸಲ್ಲಿಸಿದ್ದಾ
ಶ್ರೀ ಶ್ರೀಗಳಿಂದ ಮಠ ಬೆಳೆದಿದೆ. ಇಲ್ಲಿ ನಿರ್ಮಾಣವಾಗುತ್ತಿರುವ ಭವ್ಯ ದಿ
ಡೈನಿಂಗ್ ಹಾಲ್ ಮತ್ತು ಹಾಸ್ಟಲ್ ಭಾರತದಲ್ಲಿ ಎಲ್ಲಿಯೂ ಇಲ್ಲ, ಎಲ್ಲರೂ ಇವ
ನೋಡಬೇಕು. ಉದಾರವಾಗಿ ಹಣ ನೀಡಬೇಕು. ಯಾರೂ ವಾಗ್ದಾನರೂಪದ
ಉಳಿಸಿಕೊಳ್ಳದೆ ಶೀಘ್ರವಾಗಿ ಸಂದಾಯ ಮಾಡಬೇಕೆಂದು ಕೋರಿದರು.

ಸಮಾರಂಭದ ಅಧ್ಯಕ್ಷತೆವಹಿಸಿದ್ದ ಮೈಸೂರು ಸುತ್ತೂರು ವೀರಸಿಂಹಾಸನಾಧೀಶ
ಶ್ರೀ ಶ್ರೀ ಶಿವರಾತ್ರಿದೇಶೀಕೇಂದ್ರಸ್ವಾಮಿಗಳು ಮಾತನಾಡಿ ಇಂದು ದಿವ್ಯ ಚೇತನ
ಜೀವನ ದರ್ಶನಕ್ಕಾಗಿ ಅಪಾರ ಜನಸ್ತೋಮ ಸೇರಿದೆ. ಶ್ರೀ ಶ್ರೀಗಳು 87 ವರ್ಷಗ
ಅರ್ಥಪೂರ್ಣ ಬದುಕನ್ನು ಮಾಡಿದ್ದಾರೆ. ಇದು ಯುವಕರಿಗೆ ಆಶ್ಚರ್ಯವಾಗುತ್ತ
ಪ್ರಸ್ತುತ ಇವರ ಬದುಕು ಉತ್ಸಾಹ ಅಪರಿಮಿತವಾದುದು. ನಾಡಿನ ವಿದ್ಯಾರ್ಥಿ ಸಮ
ದಾಯಕ್ಕೆ ಸಂಪೂರ್ಣವಾಗಿ ತಮ್ಮನ್ನು ಸಮರ್ಪಿಸಿಕೊಂಡಿದ್ದಾರೆ. ಬಸವಾದಿ ಪ್ರಮಥ
ಆದರ್ಶವನ್ನು ಮುನ್ನಡೆಸಿಕೊಂಡು ಬಂದಿದ್ದಾರೆ. ಎಲ್ಲ ಶರಣರ ಜೀವನ ದರ್ಶನವನ

ಶ್ರೀ ಶ್ರೀಗಳು ಕಾರ್ಯಕ್ಷೇತ್ರದಲ್ಲಿ ಕಾಣಬಹುದು, ನಿರಂತರ ದಾಸೋಹ ಮೂರ್ತಿ. ಶಿಸ್ತಿನ ಸಿಪಾಯಿ, ಮಹಾಮಣಿಹದ ರೂವಾರಿಗಳಾಗಿದ್ದಾರೆ, ಸಮಾಜ ಮತ್ತು ರಾಷ್ಟ್ರಕ್ಕೆ ಇವರ ಅನುಗ್ರಹ ಆಶೀರ್ವಾದ ನಿರಂತರವಾಗಿದೊರೆಯಲಿ ಎಂದು ಹಾರೈಸಿದರು.

**ಶ್ರೀ ಶ್ರೀ ಗಳವರ ಆಶೀರ್ವಚನ :-** ಜನ್ಮದಿನಾಚರಣೆ ಆಚರಿಸುವ ಹಂಬಲವಿಲ್ಲ, ಆದರೆ ನಾಡಿನ ಗಣ್ಯರಿಗೆ ಸನ್ಮಾನಿಸುವ ಸಂಪ್ರದಾಯ ಆಚರಣೆಗೆ ಬಂದ ಫಲವಾಗಿ ಒಪ್ಪಿಗೆ ನೀಡಿದೆ. ಶ್ರೀಮಠದ ಕಾರ್ಯ ಸಣ್ಣ ಪ್ರಮಾಣದಲ್ಲಿ ಪ್ರಾರಂಭವಾಯಿತು. ಅನೇಕ ಮಂದಿ ಸ್ವಯಂ ಪ್ರೇರಿತವಾಗಿ ಸಹಾಯಮಾಡಿ ಅಗಾಧವಾದ ಕಾರ್ಯವಾಗಿದೆ. ಆದರೆ ಅಂತರಂಗದ ಕೂಗು ಒಂದು ಇದೆ. ಕಾವಿ-ಲಾಂಛನ, ತ್ಯಾಗದ ಗೌರವದ ಪ್ರತೀಕ, ಭೌತಿಕ ಪ್ರಗತಿಯೇ ಮುಖ್ಯವಲ್ಲ, ಆಧ್ಯಾತ್ಮಿಕತೆ ಬೆಳೆಯಬೇಕು, ಹಿಂದಿನ ಗುರುಗಳ ಆಶೀರ್ವಾದ ರಕ್ಷಾಕವಚವಾಗಿದೆ. ನನಗೆ ಕರ್ನಾಟಕ ವಿಶ್ವವಿದ್ಯಾಲಯ ಡಾಕ್ಟರೇಟ್ ಪದವಿ ನೀಡಿದಾಗ ಭಾರತದ ಶ್ರೇಷ್ಠ ನ್ಯಾಯಾಧೀಶರಾದ ಶ್ರೀ ಗಜೇಂದ್ರ ಗಡಕರ್ ಹೇಳಿದ ಮಾತು 1966ರಲ್ಲಿ ಹೆಚ್ಚು ಪ್ರಭಾವ ಮೂಡಿಸಿತು. ಆ ಮಾತೆಂದರೆ ಭಾರತದ ಎಲ್ಲಾ ಸಮಸ್ಯೆಗಳನ್ನು ಪರಿಹಾರ ಮಾಡಲು ಮಹಾನ್ ಬಸವೇಶ್ವರರ ಆದರ್ಶವನ್ನು ಅನುಷ್ಠಾನಕ್ಕೆ ತರಬೇಕು, ಒಳ-ಪಂಗಡಗಳ ಭೇದ ಭಾವಸಲ್ಲದು. ಎಲ್ಲರನ್ನೂ ಆತ್ಮೀಯ ಭಾವನೆಯಿಂದ ಕಾಣಬೇಕು. ಸ್ವಾತಂತ್ರ್ಯ ನಂತರ ನಮ್ಮ ತನ ನಾವೆ ಕಳೆದುಕೊಂಡಿದ್ದೇವೆ. ಭಾರತೀಯತೆ ಕಳೆದು ಹೋಗಿದೆ. ಸ್ವಾರ್ಥಿಗಳ ತಂಡ ಹೆಚ್ಚಾಗಿದೆ. ನೈತಿಕ ಪತನವಾಗಿದೆ. ಅಂತಃಶಕ್ತಿ ಬೆಳೆಯಬೇಕು. ಪ್ರತಿ ವ್ಯಕ್ತಿ ಕ್ರಿಯಾಶೀಲನಾಗಬೇಕು. ಒಳ್ಳೆಯ ಹವ್ಯಾಸಗಳನ್ನು ಬೆಳೆಸಿಕೊಂಡು ನಿರಹಂಕಾರಿಯಾಗಬೇಕು ಭೋಗ ಜೀವನಕ್ಕೆ ಕಡಿವಾಣ ಹಾಕಬೇಕು. ಇದೇ ಬಗೆಯ ಅಭಿಮಾನ, ವಿಶ್ವಾಸ ಎಲ್ಲಾ ಕಾಲಕ್ಕೂ ಶ್ರೀ ಮಠದ ಮೇಲಿರಲಿ ಎಂದು ಹೇಳಿ ಭಕ್ತ ಸಮುದಾಯಕ್ಕೆ ಮಂಗಳ ಕೋರಿದರು.

ಪ್ರಾರಂಭಕ್ಕೆ ವಿದ್ಯಾರ್ಥಿಗಳಿಂದ ಸಾಮೂಹಿಕ ಪ್ರಾರ್ಥನೆಯಾಯಿತು ಬೆಂ. ಗ್ರಾ. ಜಿಲ್ಲೆ. ವಿಶೇಷ ಜಿಲ್ಲಾಧಿಕಾರಿಗಳಾದ ಶ್ರೀ ಸೋಮಶೇಖರ್ ಕಾರ್ಯಕ್ರಮ ನಿರೂಪಿಸಿದರು. ಸಿದ್ಧಗಂಗಾ ವಿದ್ಯಾಸಂಸ್ಥೆಯ ಸಹಕಾರ್ಯದರ್ಶಿ ಶ್ರೀ ಟಿ.ಕೆ. ನಂಜುಂಡಪ್ಪನವರು ಸ್ವಾಗತ ಕೋರಿದರು. ಶ್ರೀ ಬಿ. ಎಸ್. ಮಲ್ಲಿಕಾರ್ಜುನಯ್ಯ ಅವರಿಂದ ವಚನಗಾಯನ ನಡೆಯಿತು. ಪ್ರಾಧ್ಯಾಪಕ ಹೆಚ್. ವಿ. ವೀರಭದ್ರಯ್ಯನವರು ವಂದನೆ ಸಲ್ಲಿಸಿದರು.



## ವಿದ್ವಾನ್ ಶ್ರೀ ಸಿ. ಎಂ. ರುದ್ರಾರಾಧ್ಯಶರ್ಮರು

ಪ್ರಸಿದ್ಧ ಸಂಸ್ಕೃತ ವಿದ್ವಾಂಸರೂ, ಸಿದ್ಧಗಂಗಾ ಸಂಸ್ಕೃತ ಕಾಲೇಜಿನ ವಿಶ್ರಾಂತ ಪ್ರಾಧ್ಯಾಪಕರೂ ಆದ ವಿದ್ವಾನ್ ಶ್ರೀ ಸಿ.ಎಂ. ರುದ್ರಾರಾಧ್ಯಶರ್ಮರು ದಿನಾಂಕ 14-4-95ರಂದು ಶಿವಾಧೀನರಾದುದಕ್ಕೆ "ಸಿದ್ಧಗಂಗಾ" ಅತೀವ ದುಃಖಕ್ಕೆ ಒಳಗಾಗಿದೆ.

ರುದ್ರಾರಾಧ್ಯಶರ್ಮರು ಕಾಶಿ ವಿಶ್ವವಿದ್ಯಾಲಯದಲ್ಲಿ ವ್ಯಾಕರಣ ಹಾಗೂ ವೇದಾಂತ ಶಾಸ್ತ್ರಗಳಲ್ಲಿ ವಿದ್ವತ್ ಪದವಿಗಳನ್ನು ಪಡೆದಿದ್ದರು. ಉದ್ದಾಮ ವಿದ್ವಾಂಸರು, ಉದಾತ್ತ ಚಿಂತಕರು, ಉತ್ತಮ ಬೋಧಕರು ಪ್ರಾಮಾಣಿಕ ನಿಸ್ವಾರ್ಥ ಸೇವಾ ಜೀವಿಗಳೂ, ಆಗಿದ್ದರು. ಶ್ರೀಯುತರು ತಮ್ಮ ಸೇವಾ ಅವಧಿ ಹಾಗೂ ನಿವೃತ್ತಿ ನಂತರವೂ ಸಿದ್ಧಗಂಗಾ ಕಮ್ಮಟಕ್ಕೆ ತಮ್ಮನ್ನು ಸಂಪೂರ್ಣವಾಗಿ ಸಮರ್ಪಿಸಿ ಕೊಂಡಿದ್ದರು. ಸಿದ್ಧಗಂಗಾಕ್ಷೇತ್ರ ಒಬ್ಬ ನಿಷ್ಠಾವಂತ ಸೇವಾ ಜೀವಿಯನ್ನು ಕಳೆದು ಕೊಂಡಿದೆ.

ಶ್ರೀಯುತರನ್ನು ಅಗಲಿರುವ ಕುಟುಂಬ ವರ್ಗದವರ ದುಃಖವನ್ನು ಸಹಿಸುವ ಶಕ್ತಿಯನ್ನು ಬಸವಾದಿ ಪ್ರಮಥರು ನೀಡಲೆಂದು "ಸಿದ್ಧಗಂಗಾ" ಪ್ರಾರ್ಥಿಸುತ್ತಾ ಲಿಂಗೈಕ್ಯರ ಆತ್ಮಕ್ಕೆ ಶಾಂತಿಯನ್ನು ಕೋರುತ್ತಾ ತನ್ನ ಶ್ರದ್ಧಾಂಜಲಿಯನ್ನು ಸಮರ್ಪಿಸಿತು.

## ಶ್ರದ್ಧಾಂಜಲಿ ಮಾಜಿ ಪ್ರಧಾನಿ ಶ್ರೀ ಮುರಾರ್ಜಿ ದೇಸಾಯಿ

ಭಾರತದ ಪ್ರಧಾನಿಗಳಾಗಿ ಸೇವೆ ಸಲ್ಲಿಸಿದ್ದ ಮಹಾತ್ಮಗಾಂಧೀಜಿಯವರ ಅಪ್ಪಟ ಅನುಯಾಯಿಗಳಿಂದ ಧ್ಯೇಯ ನಿಷ್ಠ ಮಹಾವ್ಯಕ್ತಿ,ಮಹಾಚೇತನ ಶ್ರೀ ಮುರಾರ್ಜಿ ದೇಸಾಯಿ ಅವರು 10-4-95ರಂದು ನಿಧನರಾದುದಕ್ಕೆ ಸಿದ್ಧಗಂಗಾ ಅತೀವ ಶೋಕಕ್ಕೆ ಒಳಗಾಗಿದೆ.

ರಾಷ್ಟ್ರಾಭಿಮಾನಿ ಪರಂಪರೆಗೆ ಸೇರಿದ ಮಹೋನ್ನತ ನಾಯಕ ಕಣ್ಮರೆಯಾದುದು ರಾಷ್ಟ್ರಕ್ಕಾದ ಅಪಾರನಷ್ಟ. ದೇಸಾಯಿಅವರು ರಾಷ್ಟ್ರದ ಅಭಿವೃದ್ಧಿಗಾಗಿ ಜೀವನದ ಉದ್ದಕ್ಕೂ ಅರ್ಪಣಾ ಮನೋಭಾವದಿಂದ ವಿವಿಧ ಸ್ಥಾನಗಳಲ್ಲಿದ್ದು ಸೇವೆಸಲ್ಲಿಸಿದ ರಾಷ್ಟ್ರಪ್ರೇಮಿಗಳು ನಿರ್ಭಿಡೆಯ ಸ್ವಭಾವದ, ನೇರಮಾತಿನ, [illegible] ಉನ್ನತ ರಾಜಕೀಯ ಮುತ್ಸದ್ಧಿಯನ್ನು ಕಳೆದುಕೊಂಡು ರಾಷ್ಟ್ರ ಬಡವಾಗಿದೆ. ಈ ಸಮುದಾಯದಲ್ಲಿ ಜನತೆ ಅವರಿಗೆ ಸಲ್ಲಿಸಬಹುದಾದ ಗೌರವವೆಂದರೆ ಅವರು ನಡೆದಹಾದಿಯಲ್ಲಿ ನಡೆಯುವುದೇ ಆಗಿದೆ. ದಯಾಮಯನಾದ ಪರಶಿವನು ಅಗಲಿದ ಮುರಾರ್ಜಿ ದೇಸಾಯಿ ಅವರ ಆತ್ಮಕ್ಕೆ ಚಿರಶಾಂತಿಯನ್ನು ಕರುಣಿಸಲೆಂದು "ಸಿದ್ಧಗಂಗಾ" ತನ್ನ ಭಕ್ತಿ ಪೂರ್ವಕ ಶ್ರದ್ಧಾಂಜಲಿಯನ್ನು ಅರ್ಪಿಸಿದೆ.

ಸ್ಥಾಪನೆ : 1943

ತಂತಿ : 'ವೀರಶೈ...

ಕೆ.ಎಸ್.ಟಿ. 73606285 } ದಿ 24-8-62
ಸಿ.ಎಸ್.ಟಿ. 73656288

ಕೇಂದ್ರ ಕಛೇರಿ : { 7286 / 7020

ಮಿನಿ ಬಜಾರ್: 3511

# ವೀರಶೈವ ಸಹಕಾರ ಸಂಘ ನಿಯಮಿತ

(ಬೆಂಗಳೂರು ನಗರ ಜಿಲ್ಲಾ ಕೇಂದ್ರ ಸಹಕಾರ ಸಗಟು ಮಾರಾಟ ಮಳಿಗೆ)

ಅರ್ಪಣ ಕಾಂಪ್ಲೆಕ್ಸ್, 1 ನೇ ಮಹಡಿ, ಎಸ್. ಸಿ. ರಸ್ತೆ, ಬೆಂಗಳೂರು 560009

ವ್ಯವಹಾರ : ಸ್ವಚ್ಛ, ಗುಣಮಟ್ಟದ ದಿನನಿತ್ಯದ ಬಳಕೆ ಪದಾರ್ಥಗಳನ್ನು ಕಡಿಮೆ ದರ... ಸಗಟು ಮಾರಾಟ ಶಾಖೆ ಮತ್ತು ಚಿಲ್ಲರೆ ಮಾರಾಟ ಶಾಖೆ ಮೂಲಕ ವಿತರಣೆ.
ಗ್ರಾಹಕರ ಮನೆಗಳಿಗೆ ಸರಬರಾಜು ವ್ಯವಸ್ಥೆ ಮಾಡಲಾಗುವುದು.

1993-94 ನೇ ಸಾಲಿನಲ್ಲಿ ಷೇರು ಬಂಡವಾಳ :

| | |
|---|---|
| ಸದಸ್ಯರಿಂದ | ರೂ. 7.08 ಲಕ್ಷ |
| ಸರ್ಕಾರದಿಂದ | ರೂ. 13-42 ಲಕ್ಷ |
| ಒಟ್ಟು | ರೂ. 20.50 ಲಕ್ಷ |

1) ಸದಸ್ಯರ ಸಂಖ್ಯೆ : 5803
2) ಸಗಟು ಮತ್ತು ಚಿಲ್ಲರೆ ಮಾರಾಟ : ರೂ. 1800.00 ಲಕ್ಷ
3) ಆಪದ್ಧನ : ರೂ. 12.98 ಲಕ್ಷ
4) ಇತರೆ ನಿಧಿಗಳು : ರೂ. 35.00 ಲಕ್ಷ
5) 1993-94 ರಲ್ಲಿ ನಿವ್ವಳ ಲಾಭ : ರೂ. 05.75 ಲಕ್ಷ
6) ಸದಸರಿಗೆ ಸೌಲಭ್ಯಗಳು :

ಅ) ಕೊಳ್ಳುವ ಪದಾರ್ಥದ ಮೇಲೆ ಶೇ. 3 ರಿಯಾಯಿತಿ
ಆ) ಷೇರಿನ ಮೇಲೆ ಶೇ. 9 ಷೇರು ಲಾಭಾಂಶ

ಮಾನ್ಯ ಸದಸ್ಯರು ಮತ್ತು ಗ್ರಾಹಕರ ಅನುಕೂಲಕ್ಕಾಗಿ ಬೆಂಗಳೂರು ನಗರದಲ್ಲಿ 4 ಸಗಟು ಮಾರಾಟ ಮಳಿಗೆಗಳು, 38 ಚಿಲ್ಲರೆ ಮಳಿಗೆಗಳು ಮತ್ತು ವಿಜಯನಗರದ ಬಡಾವಣೆಯಲ್ಲಿ ಒಂದು ಡಿಪಾರ್ಟ್‌ಮೆಂಟಲ್ ಸ್ಟೋರ್ಸ್.

ಕಾರ್ಯಕಾರಿ ಮಂಡಳಿಯ ಸದಸ್ಯರುಗಳು :

1) ಶ್ರೀ ಬಿ. ಎಂ. ಶ್ರೀಕಂಠಸ್ವಾಮಿಯವರು
ಅಧ್ಯಕ್ಷರು
2) ಶ್ರೀ ಜಿ. ತೋಟದಪ್ಪನವರು
ಉಪಾಧ್ಯಕ್ಷರು

-: ನಿರ್ದೇಶಕರು :-

3) ಶ್ರೀ ಬಿ. ಎಸ್. ಪರಮಶಿವಯ್ಯನವರು
4) ಶ್ರೀ ವೈ. ಟಿ. ಮಹದೇವಪ್ಪನವರು
5) ಶ್ರೀ ಬಿ. ಟಿ. ಉಮೇಶ್‌ರವರು
6) ಶ್ರೀ ಬಿ. ಬಸವರಾಜುರವರು
7) ಶ್ರೀ ಎಂ. ಶಿವಪ್ಪನವರು
8) ಶ್ರೀ ಡಿ. ಚಂದ್ರಶೇಖರಯ್ಯನವರು
9) ಶ್ರೀ ಆರ್. ನೀಲಕಂಠಯ್ಯನವರು
10) ಶ್ರೀ ಜಿ. ಶಿವಕುಮಾರ್‌ರವರು
11) ಶ್ರೀಮತಿ ಎಸ್. ಗಿರಿಜರವರು
12) ಶ್ರೀಮತಿ ಪ್ರೇಮಸೋಮಸುಂದರ್‌ರವರು
13) ಶ್ರೀಮತಿ ಟಿ. ಕೆಂಪಮ್ಮನವರು M.L...
ಸ. ನಾ. ಪ್ರತಿನಿಧಿಗಳು
14) ಶ್ರೀ ಡಿ. ಎಂ. ರುದ್ರಪ್ಪನವರು
15) ಶ್ರೀ ಜಿ. ಪುಟ್ಟಗಂಗಯ್ಯನವರು
16) ವ್ಯವಸ್ಥಾಪಕನಿರ್ದೇಶಕರು
ಬಿ.ಡಿ. ಸಿ. ಸಿ. ಬ್ಯಾಂಕ್
17) ಉಪನಿಬಂಧಕರು, ಸಹಕಾರ ಸಂಘಗಳು
ಉಪನಿಬಧಂಕರ ಕಛೇರಿ,
ಬೆಂಗಳೂರು ನಗರ ಜಿಲ್ಲೆ
18) ಶ್ರೀ ಕೆ. ಎನ್. ನರಸಿಂಹಸ್ವಾಮಿಯವರು
ಪ್ರಧಾನ ವ್ಯವಸ್ಥಾಪಕರು

# ಸ್ಪಷ್ಟ ದಿಕ್ಕಿನಲ್ಲಿ ದಿಟ್ಟ ಹೆಜ್ಜೆಗಳು

ಹಣ್ಣೆಲೆಗಳು ಉದುರಿ ಮರಗಿಡಗಳಲ್ಲಿ ಹೊಸಚಿಗುರು ಸಂಭ್ರಮಿಸುವ ವಸಂತಕಾಲ
ಈ ಯುಗಾದಿ

ಜನತೆಯ ಆಶೋತ್ತರಗಳಿಗೆ ಸ್ಪಂದಿಸುತ್ತಿರುವ ಕರ್ನಾಟಕ ಹೊಸ ಸರ್ಕಾರ ದೃಢ ಹೆಜ್ಜೆಗಳನ್ನು ಇಡುತ್ತಿರುವ ಪರ್ವಕಾಲವೂ ಹೌದು. ನುಡಿದಂತೆ ನಡೆವ ಹೆಚ್.ಡಿ ದೇವೇಗೌಡರ ನೇತೃತ್ವದ ಈ ಸರ್ಕಾರ ಅನುಷ್ಠಾನಕ್ಕೆ ತಂದಿರುವ ಯೋಜನೆಗಳು ಹತ್ತು ಹಲವು.

**ರಿಯಾಯಿತಿ ದರದಲ್ಲಿ ಅಕ್ಕಿ :–** ಹಸಿರು ಪಡಿತರ ಚೀಟಿ ಹೊಂದಿರುವ 52 ಲಕ್ಷ ಕುಟುಂಬಗಳಿಗೂ ಕೆ.ಜಿ.ಗೆ 3.20ರ ರಿಯಾಯಿತಿ ದರದಲ್ಲಿ ಅಕ್ಕಿ ಪೂರೈಕೆ ಕೊಟ್ಟ ಮಾತಿನಂತೆ ಬೇವು-ಬೆಲ್ಲ ಸವಿಯುವ ಶುಭದಿನದಿಂದ ಈ ಯೋಜನೆ ಆರಂಭ.

**ಕುಡಿಯುವ ನೀರು :–** ಕುಡಿಯುವ ನೀರು ಪೂರೈಕೆಗೆ ಈ ವರ್ಷ ಹೆಚ್ಚಿನ ಆದ್ಯತೆ. ಹಿಂದಿನ ವರ್ಷಕ್ಕಿಂತ ಶೇ 19.8 ರಷ್ಟು ಹೆಚ್ಚಿನ ಅನುದಾನ. ಬರು ಬೇಸಿಗೆಯಲ್ಲಿ ನೀರಿನ ಸಮಸ್ಯೆಯ ಪರಿಹಾರಕ್ಕೆ ಈಗಾಗಲೇ ರೂ. 104 ಕೋಟಿ ಬಿಡುಗಡೆ. ಅಗತ್ಯವಿದ್ದಡೆ ಕೊಳವೆ ಬಾವಿ ಕೊರೆಯಲು ಆದೇಶ.

**ಆರೋಗ್ಯ ನಿಧಿ :–** ಆಧುನಿಕ ಚಿಕಿತ್ಸಾ ಸೌಲಭ್ಯಗಳನ್ನು ಬಡಜನರಿಗೂ ವಿಸ್ತರಿಸಲು ಒಂದುನೂರು ಕೋಟಿ ರೂ.ಗಳ. ಆರೋಗ್ಯ ನಿಧಿ ಸ್ಥಾಪನೆ. ಸರ್ಕಾರದಿಂದ ಈ ನಿಧಿಗೆ ಹತ್ತು ಕೋಟಿ ರೂ. ವಂತಿಗೆ. ಹೃದ್ರೋಗ ಕ್ಯಾನ್ಸರ್, ನ್ಯೂರೋಸರ್ಜಿಕಲ್ ಕಾಯಿಲೆಗಳು ಮೂತ್ರಪಿಂಡ ಸಂಬಂಧಿತ ರೋಗ ಪೀಡಿತ ಬಡಜನರಿಗೆ ಈ ನಿಧಿಯಿಂದ ನೆರವು

**ಆಧಾರ :–** ನಾಲ್ಕು ಲಕ್ಷಕ್ಕೂಹೆಚ್ಚಿರುವ ಅಂಗವಿಕಲರಿಗಾಗಿ 'ಆಧಾರ' ಯೋಜನೆ ಅನುಷ್ಠಾನ. ಈ ವರ್ಷ ಒಂದು ಸಾವಿರ ಅಂಗಡಿಗಳನ್ನು ಆರಂಭಿಸಲು ಅಂಗವಿಕಲರಿಗೆ ಪ್ರತಿಯೊಂದು ಅಂಗಡಿಗೂ 10 ಸಾವಿರ ರೂ. ನೆರವು. ಇದಕ್ಕಾಗಿ ಒಂದು ಕೋಟಿ ರೂ.ಗಳ ನಿಗದಿ. ಅಂಗವಿಕಲರಿಗಾಗಿಯೇ ದುಡಿಯುತ್ತಿರುವ ಸ್ವಯಂ ಸೇವಾ ಸಂಘ-ಸಂಸ್ಥೆಗಳಿಗೆ ಪ್ರೋತ್ಸಾಹ ನೀಡಲು 50 ಲಕ್ಷ ರೂ. ಅನುದಾನ.

**ಜನತಾ ದರ್ಶನ :–** ಜನತೆಯ ಸಂಕಷ್ಟಗಳಿಗೆ ಮುಖ್ಯ ಮಂತ್ರಿಗಳಿಂದ ನೇರ ಸ್ಪಂದನ. ಸಮಸ್ಯೆಗಳ ಪರಿಹಾರಕ್ಕೆ ಮಂತ್ರಿಗಳಿಂದಲೇ ಅಹವಾಲು ಸ್ವೀಕಾರ. ಹಲವು ಸಮಸ್ಯೆಗಳಿಗೆ ಖಚಿತ ಪರಿಹಾರ.

ವಸತಿ :– ದುರ್ಬಲ ವರ್ಗದವರಿಗೆ ಒಂದು ಲಕ್ಷ ಮನೆಗಳ ನಿರ್ಮಾಣ. ಫಲಾನು ಭವಿಗಳ ಅಯ್ಕೆಗಾಗಿ ಹೊಸ ಸೂತ್ರ.

ನೀರಾವರಿ :– ಕೃಷ್ಣ ಮೇಲ್ದಂಡೆ ಯೋಜನೆಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸಲು ಕ್ರಮ. ಕೃಷ್ಣಾ ಭಾಗ್ಯ ಜಲನಿಗಮ ಸರ್ಕಾರದ ಅನುದಾನ ಹಾಗೂ ಬಂಡವಾಳ ಮಾರುಕಟ್ಟೆಯಿಂದ ಸಾಲ ಪಡೆದು ಬಂಡವಾಳ ಪೂರೈಕೆ.

ರಾಜ್ಯ **ಯುವ ಪರಿಷತ್ತು :–** ಯುವಜನ ಶಕ್ತಿಯನ್ನು ಉತ್ಪಾದಕ ಚಟು ವಟಿಕೆಗಳಲ್ಲಿ ತೊಡಗಿಸುವ ಸಲುವಾಗಿ ಪರಿಷತ್ತಿನ ಸ್ಥಾಪನೆ. ಇದಕ್ಕಾಗಿ ೫ ಕೋಟಿ ರೂ.ಗಳ ಅನುದಾನ.

ಶಿಕ್ಷಣ :– 12000 ಶಾಲಾ ಕೊಠಡಿಗಳ ನಿರ್ಮಾಣ ಪ್ರಾಥಮಿಕಶಾಲಾ ಶಿಕ್ಷಕರ ನೇಮಕಾತಿಗೆ ತೀರ್ಮಾನ.

ಆಡಳಿತ ವಿಕೇಂದ್ರೀಕರಣ :– ಜನತೆ ತೋರಿರುವ ಒಲವಿಗೆ ಪ್ರತಿಯಾಗಿ ಜನತೆ ಅಧಿಕಾರ ನೀಡುವ ಪಂಚಾಯತ್ ವ್ಯವಸ್ಥೆಯ ಬಲವರ್ಧನೆ. ಜಿಲ್ಲಾ ಹಾಗೂ ತಾಲ್ಲೂಕು ಪಂಚಾಯತ್‌ಗಳಿಗೆ ನಿಗದಿಪಡಿಸಿದಂತೆ ಮಾರ್ಚ್–95ರಲ್ಲಿ ಚುನಾವಣೆ ನಡೆಸಿದ ಸಂತಸ.

**" ನುಡಿದಂತೆ ನಡೆಯುತ್ತಿರುವ ಸರ್ಕಾರ ಜನತೆಗೆ ಯುಗಾದಿ ಶುಭಾಶಯಗಳು**

## ಕರ್ನಾಟಕ ವಾರ್ತೆ


ತುಮಕೂರಿಗೆ ಬರುವವರಿದ್ದೀರಾ? ಹಾಗಿದ್ದರೆ, ವೈವಿಧ್ಯಮಯ ಊಟ,
ವಸತಿ, ತಿಂಡಿ ತಿನಿಸುಗಳ ನಮ್ಮ ಈ ಸ್ಥಳಗಳು ಸದಾ ನಿಮ್ಮನ್ನು ಸ್ವಾಗತಿಸುತ್ತಿವೆ.
ಹೋಟೆಲ್
ಶ್ರೀ ನಂಜುಂಡೇಶ್ವರ
ಊಟ, ವಸತಿ ಮತ್ತು
ಉಪಹಾರ ಮಂದಿರ,
ಬಿ.ಹೆಚ್. ರಸ್ತೆ, ತುಮಕೂರು-1
ದೂರವಾಣಿ
8597, 2373, 2577
Hotel Shree Nanjundeswara
SRI
ಶ್ರೀ ನಂಜುಂಡೇಶ್ವರ
ಬೇಕರಿ
ತುಮಕೂರು ಜಿಲ್ಲೆಯ ಪ್ರಖ್ಯಾತ
ಬೇಕರಿ
ಚಿಕ್ಕಪೇಟೆ ತುಮಕೂರು-1
ದೂರವಾಣಿ : 8077
ಶ್ರೀ ನಂಜುಂಡೇಶ್ವರ ರೆಸ್ಟೋರೆಂಟ್
ತುಮಕೂರಿನಲ್ಲಿ ಉತ್ತರ ಭಾರತದ ಶೈಲಿಯ ಊಟ
ಉಪಹಾರಗಳ ಶ್ರೇಷ್ಠ ದರ್ಜೆಯ ರೆಸ್ಟೋರೆಂಟ್
ಬಿ.ಹೆಚ್. ರಸ್ತೆ, ತುಮಕೂರು-1
ದೂರವಾಣಿ : 2677
ಸಿ.ವಿ. ಮಹದೇವಯ್ಯ
ಶ್ರೀ ನಂಜುಂಡೇಶ್ವರ ಸ್ವೀಟ್ಸ್
ಎಲ್ಲಾ ವಿಧವಾದ ಸಿಹಿ ಮತ್ತು ಖಾರ ತಿಂಡಿ ಹಾಗೂ
ಬೇಕರಿ ತಿನಿಸುಗಳ ನಗರದ ಏಕೈಕ ಸ್ಥಳ
ಅಶೋಕ ರಸ್ತೆ ತುಮಕೂರು-1
ದೂರವಾಣಿ : 2077



ನಿರ್ಮಾಣದ ಹಂತದಲ್ಲಿರುವ ಏಕಕಾಲದಲ್ಲಿ 3500 ಮಂದಿ
ಕುಳಿತು ಊಟಮಾಡುವ ಸುಸಜ್ಜಿತ ಪ್ರಸಾದನಿಲಯ



ನಿರ್ಮಾಣದ ಹಂತದಲ್ಲಿರುವ ಪೂಜ್ಯ ಶ್ರೀ ಶ್ರೀಗಳವರ
ವಜ್ರ ಮಹೋತ್ಸವ ಸ್ಮಾರಕ ಬೃಹತ್ ವಿದ್ಯಾರ್ಥಿನಿಲಯ

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ – 572104.

# ಪರಮ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳ

## ವಜ್ರ ಮಹೋತ್ಸವ ಪ್ರತಿಷ್ಠಾನ

ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ.

ಶ್ರೀ ಸಿದ್ಧಗಂಗಾ ಮಠದ ಇತಿಹಾಸದಲ್ಲಿ ಧಾರ್ಮಿಕವಾಗಿ, ಶೈಕ್ಷಣಿಕವಾಗಿ, ಸಾಂಸ್ಕ ವಾಗಿ, ಆಧ್ಯಾತ್ಮಿಕವಾಗಿ ಬೆಳಕಿನ ಯುಗವನ್ನು ನಿರ್ಮಾಣ ಮಾಡಿದ ಕಾರಣಿಕಪುರ ತ್ರಿವಿಧ ದಾಸೋಹ ಮೂರ್ತಿಗಳಾದ ಪ. ಪೂ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗ

‡ 1930 ರಲ್ಲಿ ಪರಮ ಪೂಜ್ಯ ಉದ್ದಾನ ಶಿವಯೋಗಿಗಳ ಕರಕಮಲ ಸಂಜಾತರ ಶ್ರೀ ಮಠದ ಸೇವಾ ಕೈಂಕರ್ಯಗಳನ್ನು ಸಾಗರದಷ್ಟು ವಿಸ್ತರಿಸಿದ್ದಾರೆ.

‡ ಪೂಜ್ಯರು ಭಾರತೀಯ ಸಂಸ್ಕೃತಿಯ ಸಾಕಾರ ಮೂರ್ತಿಗಳು. ಮಾನವೀಯತೆ ಮಂಗಳಕಾರರು. ಅಪೂರ್ವ ರಾಷ್ಟ್ರ ಚಿಂತಕರು.

‡ ಶ್ರೀಗಳವರ ಸೇವಾ ಮಹಿಮೆಯನ್ನು ಕೃತಜ್ಞತೆಯಿಂದ ಸ್ಮರಿಸಿದ ನಾಡಿನ ಭಕ್ತಾ ಗಳು, ಹಳೆಯ ವಿದ್ಯಾರ್ಥಿಗಳು ಇದೀಗ ವಜ್ರ ಮಹೋತ್ಸವ ಆಚರಿಸುವ ಉತ್ಸಾ ದಲ್ಲಿದ್ದಾರೆ, ಶ್ರೀ ಶ್ರೀ ಗಳ ಮೇರು ಸಾಧನೆಗಳನ್ನು ಪ್ರತಿಬಿಂಬಿಸುವ, ಪ್ರಸ್ತು ಶ್ರೀ ಮಠಕ್ಕೆ ಅಗತ್ಯ ಸೌಲಭ್ಯಗಳನ್ನು ಪೂರೈಸುವ ಸ್ಮಾರಕಗಳನ್ನು 5 ಕೋ ರೂ. ವೆಚ್ಚದಲ್ಲಿ ನಿರ್ಮಿಸಲಾಗುತ್ತಿದೆ.

‡ **ಭವ್ಯ ದಿವ್ಯ ಬೃಹತ್ ಪ್ರಸಾದ ನಿಲಯ.**

‡ **ಸುಸಜ್ಜಿತ ಆಧುನಿಕ ಬೃಹತ್ ವಿದ್ಯಾರ್ಥಿನಿಲಯ.**

‡ **ಆಧುನಿಕ ನೈರ್ಮಲ್ಯ ಮತ್ತು ನೀರು ಸರಬರಾಜು ವ್ಯವಸ್ಥೆ.**

ಇವುಗಳ ಅರ್ಧಭಾಗದಷ್ಟು ಕೆಲಸ ಕಾರ್ಯಗಳು ಮುಗಿದಿದ್ದು ಪೂರ್ಣವಾಗಲ ಇನ್ನು 2 ಕೋಟಿ ರೂ ಗಳು ಬೇಕಾಗಿವೆ. ಶ್ರೀ ಶ್ರೀ ಗಳವರ ಸೇವಾ ಸಾಗರ ಸ್ಮರಣಾರ್ಹ ಪುಣ್ಯಕಾರ್ಯಕ್ಕೆ ನಾಡಿನ ಭಕ್ತಾದಿಗಳು, ಅಭಿಮಾನಿಗಳು, ಮತ್ತ ಹಳೆಯ ವಿದ್ಯಾರ್ಥಿಗಳು ಕಾಣಿಕೆ ನೀಡುವುದರ ಮೂಲಕ ವಜ್ರ ಮಹೋತ್ಸ ಯೋಜನೆಗಳು ಯಶಸ್ವಿಯಾಗಲು ಸಹಕರಿಸಬೇಕಾಗಿ ಪ್ರಾರ್ಥಿಸುತ್ತೇನೆ.

ವಿ. ಸೂ :- ನಿರ್ಮಾಣ ಹಂತದಲ್ಲಿರುವ ಪ್ರತಿಷ್ಠಾನ ಭವ್ಯ ಸ್ಮಾರಕಗಳ ಚಿತ್ರಗಳನ್ ಹಿಂಬದಿ ಪುಟದಲ್ಲಿ ನೋಡಿ.

**ಪದ್ಮಭೂಷಣ ಡಾ. ಎಂ.ಸಿ. ಮೋದಿ,**
ಅಧ್ಯಕ್ಷರು

**ಬಿ.ಎಸ್. ಮುದ್ದಪ್ಪ** ಐ.ಎ.ಎಸ್.(ನಿ
ಕಾರ್ಯಾಧ್ಯಕ್ಷರು

**ಎಸ್. ಎಸ್. ಹಸಬಿ,** ಐ.ಪಿ.ಎಸ್. (ನಿ).
ಕಾರ್ಯದರ್ಶಿಗಳು